

ಶ್ರೀ ಕ್ಷೇತ್ರದ ವ್ಯವಸಾಯ ಮತ್ತು ಕೈಗಾರಿಕಾ ವಸ್ತುಪ್ರದರ್ಶನದ ಮುಕ್ತಾಯ ಸಮಾರಂಭದಂದು ಶ್ರೀ ಶ್ರೀ ಗಳವರೊಂದಿಗೆ ಮಳಿಗೆಯೊಂದರ ವೀಕ್ಷಣೆಮಾಡುತ್ತಿರುವ ಸಚಿವ ಕೆ. ಹೆಚ್. ರಂಗನಾಥ್ ಮತ್ತು ಪ್ರೊ|| ಎಂ. ಚಿಕ್ಕಣ್ಣಯ್ಯಪ್ಪ

ಏಪ್ರಿಲ್, **1979**.

## “ಶ್ರೀ ಕ್ಷೇತ್ರದ ಹಳೆಯ ವಿದ್ಯಾರ್ಥಿಗಳಿಗೊಂದು

ಸನ್ಮಾನ್ಯ ಸೋದರ ಮಿತ್ರರೇ

ಶ್ರೀ ಕ್ಷೇತ್ರದಲ್ಲಿ ಜನವರಿ ಮಾಹೆಯ ಮೊದಲ ವಾರದಂದು ಸಮಾವೇಶಗೊಂಡಿದ್ದ ಸಂಘದ ಕಾರ್ಯಕಾರಿ ಸಮಿತಿಯು ದಿನಾಂಕ **8-4-79** ನೇ ಭಾನುವಾರ ಬೆಳಿಗ್ಗೆ 11-00 ಘಂಟೆಗೆ ಸರಿಯಾಗಿ “ವಿಶೇಷ ಸರ್ವ ಸದಸ್ಯರ ಸಭೆಯನ್ನು” ಪೂಜ್ಯ ಪಾದರ ದಿವ್ಯ ನೇತೃತ್ವದಲ್ಲಿ ಸಮಾವೇಶಗೊಳ್ಳುವಂತೆ ತೀರ್ಮಾನಿಸಲಾಗಿದೆ. ಸಭೆಯಲ್ಲಿ ಶ್ರೀ ಕ್ಷೇತ್ರಕ್ಕೆ ಸಂಬಂಧಿಸಿದ ಅತ್ಯಮೂಲ್ಯವಾದ ಮಹತ್ತರ ವಿಚಾರಗಳನ್ನು ಚರ್ಚಿಸಿ ತೀರ್ಮಾನಗಳನ್ನು ಕೈಗೊಳ್ಳುವ ಪ್ರಯುಕ್ತ ತಾವಾರೂ ಉದಾಸೀನ ಮಾಡದೆ ಅವಶ್ಯ ಆಗಮಿಸಿ ತಮ್ಮ ಅಮೂಲ್ಯವಾದ ಸಲಹೆ ಸಹಕಾರವನ್ನಿತ್ತು ಈ ಅಧಿವೇಶನವನ್ನು ಯಶಸ್ವಿಗೊಳಿಸಬೇಕಾಗಿ ಪ್ರಾರ್ಥಿಸುತ್ತೇನೆ. ವಿಳಾಸಗಳು ಬದಲಾವಣೆಯಾಗಿ ಕೆಲವರಿಗೆ ಪತ್ರಗಳು ತಲುಪದಿರಬಹುದು. ಆದ್ದರಿಂದ ಪತ್ರಗಳು ತಲುಪಿದ ಸದಸ್ಯರು ತಮಗೆ ತಿಳಿದಿರುವ ಹಳೆಯ ವಿದ್ಯಾರ್ಥಿ ಮಿತ್ರರನ್ನು ಕರೆತರುವ ಕೃಪೆ ಮಾಡಬೇಕಾಗಿ ವಿನಂತಿ.

ಶ್ರೀ ಸಿದ್ಧಗಂಗಾಕ್ಷೇತ್ರ
ಹಳೆಯ ವಿದ್ಯಾರ್ಥಿ ಸಂಘ.

ಇತಿ ತಮ್ಮ ವಿಶ್ವಾಸಿ
ಎಂ. ಎಸ್. ಚನ್ನಬಸಪ್ಪ
ಪ್ರಧಾನ ಕಾರ್ಯದರ್ಶಿ

## ‘ಸಿದ್ಧಗಂಗಾ’ ಚಿರಾಯುವಾಗಲೆಂದು

### ಹರಸಿ ಹಾರೈಸಿರುವ ಆಜೀವ ಸದಸ್ಯರ ಬಳಗಕ್ಕೆ ಕೃತಜ್ಞತೆಗಳು.

599 ಮೆ॥ ರೇವಣ ಸಿದ್ದೇಶ್ವರ ಅಂಡ್ ಕೊ,
ಜನರಲ್ ಮರ್ಚೆಂಟ್ಸ್, ರಾಣಿಬೆನ್ನೂರ್,
ಧಾರವಾಡ ಜಿಲ್ಲೆ.

600 ಶ್ರೀ ಪಿ. ಜಿ. ಗುಪ್ತ ಅಂಡ್ ಶ್ರೀ ಬಿ. ಎಸ್.
ಚನ್ನಗೌಡರ್, ಜನರಲ್ ಮರ್ಚೆಂಟ್ಸ್,
ರಾಣಿಬೆನ್ನೂರ್, ಧಾರವಾಡ ಜಿಲ್ಲೆ.

601 ಮೆ॥ ಶ್ರೀ ಸಿದ್ದೇಶ್ವರ ಅಂಡ್ ಕೊ, ಮರ್ಚೆಂಟ್ಸ್
ರಾಣಿಬೆನ್ನೂರ್, ಧಾರವಾಡ ಜಿಲ್ಲೆ.

602 ಶ್ರೀ ಎಂ. ಎಸ್. ಅರಕೇರಿ
ನೆಹರು ಮಾರ್ಕೆಟ್,
ರಾಣಿಬೆನ್ನೂರ್, ಧಾರವಾಡ ಜಿಲ್ಲೆ.

603 ಶ್ರೀ ಹೆಚ್. ಸಿ. ಶಿವಮೂರ್ತಿ
ಕಮರ್ಷಿಯಲ್ ಟ್ಯಾಕ್ಸ್ ಆಫೀಸರ್.
ಹಾವೇರಿ, ಧಾರವಾಡ ಜಿಲ್ಲೆ.

604 ಶ್ರೀ ಎಸ್, ವಿ. ಚಂದ್ರಶೇಖರಪ್ಪ
ಮಂಡಿ ಮರ್ಚೆಂಟ್ಸ್,
ಕೆ. ಬಿ. ಎಕ್ಸ್‌ಟೆನ್‌ಷನ್, ದಾವಣಗೆರೆ-2

605 ಶ್ರೀ ಎಂ. ವಿ. ವೀರೇಂದ್ರ S/o
ಶ್ರೀ ಎಂ. ಪಿ. ವೀರಣ್ಣ, ಮರ್ಚೆಂಟ್ಸ್,
ಮೈಸೂರು ಮಠದಗಲ್ಲಿ, ದಾವಣಗೆರೆ

606 ಶ್ರೀ ಎಂ. ವಿರೂಪಾಕ್ಷಬಿನ್
ಎಂ. ಜಿ. ಮಹದೇವಪ್ಪ
ಮೈದನಹಳ್ಳಿ, ಮೈಸೂರು-5

607 ಕಂಚಿಗೆರೆ ಶ್ರೀ ಚನ್ನಬಸಪ್ಪ
C/o ಶ್ರೀ ಶರಣಪ್ಪ
ಅಡವಯ್ಯಮಠದಗಲ್ಲಿ, ದಾವಣಗೆರೆ-1

608 ಬೆಳ್ಳುಳ್ಳಿ ಶ್ರೀ ಕೊಟ್ರೇರಪ್ಪ
ಬೆಳ್ಳುಳ್ಳಿಗಲ್ಲಿ, ದಾವಣಗೆರೆ

(ಮುಂದುವರಿಯುತ್ತದೆ)



## ಶ್ರೀವಾಣಿ

ಪ್ರಪಂಚದಲ್ಲಿ ಸರ್ವಜೀವಿಗಳಿಗೂ ಸುಖದ ಬಯಕೆಯು ಸ್ವಾಭಾವಿಕವಾದದು. ಜೀವಕೋಟಿಯಲ್ಲಿ ಅಗ್ರಸ್ಥಾನವನ್ನು ಗಳಿಸಿರುವ ಮಾನವನಾದರೋ ವಿಶಿಷ್ಟ ವ್ಯಾಪಾರಗಳಲ್ಲಿ ಪ್ರವೃತವಾಗಿರುವುದು ಸುಖದ ಬಯಕೆಯಿಂದಲೇ. ಪರಮಾತ್ಮನಿಂದ ಅನುಗ್ರಹಿಸಲ್ಪಟ್ಟಿರುವ ಕ್ರಿಯಾಶಕ್ತಿ, ವಾಕ್ ಶಕ್ತಿ, ಧೀಶಕ್ತಿಗಳೆಲ್ಲವನ್ನೂ ಬೆಳಸಿಕೊಂಡು ಅವುಗಳನ್ನು ಅಧಿಕ ಸುಖ ಪ್ರಾಪ್ತಿಗಾಗಿ ವಿನಿಯೋಗಿಸುತ್ತಾನೆ. ಬಂದದನ್ನು ಕಿರಿದು ಮಾಡಿ, ಬಾರದನ್ನು ಹಿರಿದು ಮಾಡಿ, ತೃಪ್ತಿಯಿಲ್ಲದೆ ಅಲಭ್ಯವಾದುದ್ದನ್ನು ಇಚ್ಛಿಸಿ ಧಾವಿಸುತ್ತಾನೆ. ವೈಜ್ಞಾನಿಕರೂ ಸೃಷ್ಟಿಯ ಗರ್ಭದಲ್ಲಿ ಅಡಗಿರುವ ಅದ್ಭುತ ಶಕ್ತಿಗಳನ್ನು ಕಂಡುಹಿಡಿದು, ಅವನ್ನು ಹೊರಗೆಡವಿ, ಅನಂತರ ಶೋಧನೆಗಳನ್ನು ಮಾಡಿ, ಯಂತ್ರಗಳು ನಿರ್ಮಾಣಮಾಡುತ್ತಿರುವುದರ ಉದ್ದೇಶವೂ ಸುಖದ ಬಯಕೆಯೆನ್ನುವುದು ಸರ್ವವೇದ್ಯವಾಗಿದೆ. ಅಲ್ಪಶ್ರಮದಿಂದ ಅಧಿಕ ಸುಖವನ್ನು ಹೊಂದಬೇಕೆಂಬ ಆಕಾಂಕ್ಷೆಯಿಂದ. ಹಿಂದೆ ಅವನಿಗೆ ಪ್ರಾಪ್ತವಾಗಿರುವ ಸುಖಗಳನ್ನು ದೊರಕಿಸಿಕೊಡುವ ಇಚ್ಛೆಯಿಂದ ಮನುಷ್ಯನಿಗೆ ಯಂತ್ರೋಪಕರಣಗಳ ನೆರವನ್ನು ಒದಗಿಸಿಕೊಟ್ಟು, ಅವನ ಸ್ವಾಭಾವಿಕ ಬಯಕೆಯನ್ನು ಪೂರೈಸುವ ಕೀರ್ತಿಯನ್ನು ಹೊಂದಿರುವುದಾಗಿ ಸಂತುಷ್ಟರಾಗಿದ್ದಾರೆ. ಎಲ್ಲಾ ರಾಷ್ಟ್ರಗಳು ಅನುಭವಿಸುತ್ತಿರುವ ಸುಖವನ್ನು ಸೂರೆಗೊಂಡು ಕೇಲವೇ ಜನಾಂಗಗಳ ಸ್ವತ್ತಾಗಿ ಮಾಡಬೇಕೆನ್ನುವ, ಹಾಗೂ ಎಲ್ಲರನ್ನು ಪಾದಾ-ಕ್ರಾಂತರನ್ನಾಗಿ ಮಾಡಿತಾವು ಮತ್ತು ತಮ್ಮ ಜನಾಂಗ ಅತ್ಯುನ್ನತ ಸುಖವನ್ನು ಹೊಂದಬೇಕೆಂಬ ರಾಕ್ಷಸಿ ಮಹತ್ವಾಕಾಂಕ್ಷೆಯೇ ಭಯಂಕರವಾದ ಮಾರಣಾಸ್ತ್ರಗಳ ಸಂಶೋಧನೆಗೂ, ನಿರ್ಮಾಣಕ್ಕೂ ಮೂಲ ಹೇತುವಾಗಿದೆ.

ಮೂಲಮಾನವನನ್ನು ಚರ್ಮಚಕ್ಷುವಿಗೆ ಗೋಚರವಾಗುತ್ತಿರುವ ಇಂದ್ರಿಯಕಾನುಭವದ ವ್ಯಾಪ್ತಿಗೆ ಒಳಪಟ್ಟಿರುವ ಭೌತಿಕ ವಸ್ತುಗಳಿಂದಲೇ, ಭೋಗ ಜೀವನದಿಂದಲೇ ನಿಜವಾದ ಸುಖವು ಪ್ರಾಪ್ತಿಯಾಗುವುದೆನ್ನುವ ಹಂಬಲವುಳ್ಳವನಾಗಿರುತ್ತಾನೆ. ಅಂತೆಯೇ ಅವನ ಧ್ಯೇಯ-ಧೋರಣೆಗಳು, ಕಾರ್ಯಚಟುವಟಿಕೆಗಳು ಇಂದು ಗೋಚರವಾಗುತ್ತಿರುವ ರೂಪವನ್ನು ತಾಳಿವೆ. ವಾಸ್ತವಿಕವಾಗಿ ಮನುಷ್ಯಸಾಮಾನ್ಯನು ಇಂದು ಹೊಂದಿರುವ ತಿಳುವಳಿಕೆಯು ಸಾಧುವಾಗಿರುವುದೇ ? ಅವನು ಗಮನಿಸುತ್ತಿರುವ ಮಾರ್ಗದಲ್ಲಿ ಮುಂದುವರಿದರೆ ಇವನ ಇಚ್ಛೆಯ ವಸ್ತುವಾದ ಸುಖದ ಆತ್ಯಂತಿಕ ಕಲ್ಪನೆಯು ಅವನಿಗೆ ಪೂರೈಸಬಹುದೆ ? ಎನ್ನುವುದು ವಿಚಾರಾರ್ಹವಾದ ಅಂಶವು.

# ‘ಸಿದ್ಧಗಂಗಾ’

ಏಪ್ರಿಲ್, ೧೯೭೯

ಸಂಪುಟ–೧೫ ಸಂಚಿಕೆ–೪

ಪ್ರಕಾಶಕರು
ಹೆಚ್. ಬಿ. ಗಂಗಾಧರಯ್ಯ
ಹಳೆಯ ವಿದ್ಯಾರ್ಥಿಸಂಘದ ಪರವಾಗಿ

ಸಂಪಾದಕ ಮಂಡಲಿ
ಪಂ॥ ಚನ್ನಪ್ಪ ಎರೇಸೀಮೆ
ಪಿ. ಎನ್. ಚಂದ್ರಶೇಖರಯ್ಯ
ವಿರೂಪಾಕ್ಷಯ್ಯ
ಬಸವರಾಜು

ಜಾಹಿರಾತು ವ್ಯವಸ್ಥಾಪಕರು
ಎಂ. ರೇಣುಕಾರಾಧ್ಯ

ಮುದ್ರಕರು
ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಮುದ್ರಣಾಲಯ

ಪ್ರಕಟಣೆಯ ಸ್ಥಳ
ಶ್ರೀ ಸಿದ್ಧಗಂಗಾ ಕ್ಷೇತ್ರ

ಚಂದಾ ವಿವರ
ಆಜೀವ ಸದಸ್ಯತ್ವ: **151-00** ರೂ
ವಾರ್ಷಿಕ ಚಂದಾ: **10–00** ರೂ


## ಈ ಸಂಚಿಕೆಯಲ್ಲಿ



### ಮುಖಪುಟ

ಶ್ರೀ ಕ್ಷೇತ್ರದ ವ್ಯವಸಾಯ ಮತ್ತು ಕೈಗಾರಿಕಾ ವಸ್ತು ಪ್ರದರ್ಶನದ ಮುಕ್ತಾಯ ಸಮಾರಂಭದಂದು ಶ್ರೀ ಶ್ರೀ ಗಳವರೊಂದಿಗೆ ಮಳಿಗೆಯೊಂದರ ವೀಕ್ಷಣೆ ಮಾಡುತ್ತಿರುವ ಸಚಿವ ಕೆ. ಹೆಚ್. ರಂಗನಾಥ್ ಮತ್ತು ಪ್ರೊ. ಎಂ. ಚಿಕ್ಕಣ್ಣಯ್ಯನವರು.

### ಲೇಖಕರಲ್ಲಿ ಮನವಿ

‘ಸಿದ್ಧಗಂಗಾ’ ಲೇಖಕರಿಂದ ಧಾರ್ಮಿಕ, ಸಾಂಸ್ಕೃತಿಕ ಐತಿಹಾಸಿಕ ಹಾಗೂ ವೈಚಾರಿಕ ಲೇಖನಗಳು, ಸಣ್ಣಕಥೆ, ಕವನ, ನಗೇಹನಿ, ಪ್ರಬಂಧ ಇವುಗಳನ್ನು ಸದಾ ಸ್ವಾಗತಿಸುತ್ತದೆ. ಲೇಖನಗಳು ಫುಲ್‌ಸ್ಕೇಪ್ ಸೈಜಿನ 3 ಪುಟಗಳಿಗೆ ಮೀರದಂತಿದ್ದು, ಕಾಗದದ ಒಂದೇ ಮಗ್ಗುಲಲ್ಲಿ ಬರೆಯಲ್ಪಟ್ಟಿರಬೇಕು. ಅಸ್ವೀಕೃತ ಲೇಖನಗಳನ್ನು ಹಿಂದಿರುಗಿಸಲಾಗುವುದಿಲ್ಲ. ಸ್ವೀಕೃತ ಲೇಖನಗಳಿಗೆ ‘ಸಿದ್ಧಗಂಗಾ’ ಆಗಿಂದಾಗ್ಗೆ ನಿಗದಿಪಡಿಸಿಕೊಳ್ಳುವ ಸಂಭಾವನೆಯನ್ನು ನೀಡಲಾಗುವುದು. ಲೇಖನಗಳನ್ನು

“ಸಂಪಾದಕರು”
“ಸಿದ್ಧಗಂಗಾ” [ಕನ್ನಡ ಮಾಸ ಪತ್ರಿಕೆ]
ಶ್ರೀ ಸಿದ್ಧಗಂಗಾ ಕ್ಷೇತ್ರ-572131 ತುಮಕೂರು ಜಿಲ್ಲೆ.
ಇವರಿಗೆ ಕಳಿಸಿಕೊಡಬೇಕಾಗಿ ಪ್ರಾರ್ಥನೆ.

### ಚಂದಾದಾರರಲ್ಲಿ ವಿನಂತಿ

1979ನೆಯ ಹೊಸ ವರ್ಷದ ನಿಮ್ಮ ಚಂದಾ ನಂಬರ್ ಗುರುತಿಸಿಕೊಳ್ಳಿ. ಚಂದಾ ಅವಧಿ ಮುಗಿಯುವವರೆಗೆ ವಿಳಾಸ ಬದಲಾವಣೆ ಮತ್ತು ಇತರೆ ಬಗ್ಗೆ ವ್ಯವಹರಿಸುವಾಗ ನಿಮ್ಮ ವಿಳಾಸದ ಹಿಂಬದಿ ಇರುವ ಚಂದಾ ನಂಬರ್ ಅಥವಾ ಯಾರ ಮೂಲಕ ಸದಸ್ಯತ್ವ ಪಡೆದಿರುವಿರೋ ಆ ನಮ್ಮ ಪ್ರತಿನಿಧಿಗಳ ಹೆಸರನ್ನು ಸೂಚಿಸಿ ವ್ಯವಹರಿಸಿ.

ಚಂದಾ ಬಾಕಿ ಇರುವವರು ಸಂದಾಯ ಮಾಡಿ ‘ಸಿದ್ಧಗಂಗಾ’ ಮುನ್ನಡೆಗೆ ಸಹಕರಿಸಿ.

ಚಂದಾ ಅವಧಿ ಮುಗಿದಿರುವ ಮಾನ್ಯ ಓದುಗರು ಮುಂದಿನ ಸಾಲಿಗೆ ಮುಂದುವರಿಸಿಕೊಳ್ಳಬೇಕಾಗಿ ಪ್ರಾರ್ಥನೆ.

ಪ್ರಕಾಶಕರು
‘ಸಿದ್ಧಗಂಗಾ’ ಮಾಸ ಪತ್ರಿಕೆ, ಸಿದ್ಧಗಂಗಾ ಮಠ–572131 ತುಮಕೂರು ಜಿಲ್ಲೆ.

# ಸಂಪಾದಕೀಯ

ಇಂದು ರಾಷ್ಟ್ರವನ್ನು ಕುರಿತು ಇಡಿಯಿಡಿಯಾಗಿ ಯೋಚನೆಮಾಡುವ ಮುತ್ಸದ್ದಿಗಳೂ, ರಾಷ್ಟ್ರಾಭಿಮಾನಿಗಳೂ ದಿಕ್ಕು ತೋಚದವರಾಗಿದ್ದಾರೆ. ರಾಷ್ಟ್ರದ ಅನೇಕ ಸಮಸ್ಯೆಗಳು ಜಟಿಲವಾಗತೊಡಗಿವೆ. ವ್ಯವಸಾಯ ಪ್ರಧಾನ ರಾಷ್ಟ್ರವಾದ ಭಾರತದಲ್ಲಿ ನೂರಕ್ಕೆ ಸುಮಾರು ೮೦-೮೫ ರಷ್ಟು ಜನ ಹಳ್ಳಿಪಳ್ಳಿಗಳಲ್ಲಿ ವಾಸಿಸಿ ವ್ಯವಸಾಯವನ್ನೇ ನಂಬಿ ತೀರ ಆರ್ಥಿಕ ದುಃಸ್ಥಿತಿಗೆ ಒಳಗಾಗುತ್ತಿದ್ದಾರೆ. ಮನೆಯ ಮಂಡಳಿಯೆಲ್ಲ ಬಿಡುವಿಲ್ಲದೆ ಪರಿಶ್ರಮಿಸಿದರೂ ತುಂಬು ಜೀವನದಿಂದ ವಂಚಿತರಾಗುತ್ತಿದ್ದಾರೆ. ಕಾರಣ ವ್ಯವಸಾಯೋತ್ಪನ್ನಗಳ ಧಾರಣೆವಾಸಿಗಳು ಕೆಳಮಟ್ಟಕ್ಕಿಳಿದು ಯಂತ್ರೋತ್ಪಾದಕ ವಸ್ತುಗಳು ಗಗನಕ್ಕೇರುತ್ತಿರುವುದು. “ಕಬ್ಬು, ಜೋಳ, ರಾಗಿ, ತರಕಾರಿ, ಗೋಧಿ, ಕಡಲೆಕಾಯಿ, ಹತ್ತಿ ಮೊದಲಾದ ವಸ್ತುಗಳ ಬೆಲೆಗಳು ಕುಸಿದುಹೋಗಿವೆ. ನಮಗೇನೂ ಗಿಟ್ಟುತ್ತಿಲ್ಲ” ಎಂಬ ಕೂಗು ರೈತರದಾದರೆ ಕಾರ್ಖಾನೆಯ ಕೂಲಿಕಾರರು, ನೌಕರ ವರ್ಗದವರು. ಬ್ಯಾಂಕ್ ನೌಕರರು, ಸರಕಾರಿ ನೌಕರರೇ ಮೊದಲಾದವರು- “ನಮ್ಮ ಸಂಬಳ ಕಡಿಮೆ ಸಂಬಳಸಾರಿಗೆಗಳು ಹೆಚ್ಚಾಗಬೇಕೆಂಬ” ಆಗ್ರಹ ತಪ್ಪೇ ಇಲ್ಲ. ಸಂಘಟಿತರಾದ ಈ ಜನ ಮುಷ್ಕರ ಮಹಾಸ್ತ್ರ ಪ್ರಯೋಗಮಾಡಿ ಅಂತೂ ಇಂತೂ ತಮ್ಮ ಸಂಬಳಸಾರಿಗೆಗಳನ್ನು ಗುಣಪಡಿಸಿಕೊಂಡು ಇದ್ದುದರಲ್ಲಿ ಚೆನ್ನಾಗಿಯೇ ಬದುಕುತ್ತಿದ್ದಾರೆ. ಈ ಯಾವ ಮಹಾಸ್ತ್ರವನ್ನು ಪ್ರಯೋಗಿಸಲಸಮರ್ಥನಾದ ರೈತ ತನ್ನ ಹಣೆಯ ಬರಹವೇ ಇಷ್ಟೇಂದು ತಲೆಬಗ್ಗಿಸಿ ನಿಟ್ಟುಸಿರು ಬಿಡುತ್ತಾ ತನ್ನ ಕರ್ತವ್ಯದಲ್ಲಿ ಮುಂದುವರೆಯುತ್ತ ಬಡವಾಗುತ್ತಿದ್ದಾನೆ. ಹೀಗಾಗಿ ವ್ಯವಸಾಯ ಭಕ್ತಿಯೇ ಜನತೆಯಿಂದ ಮಾಯವಾಗುತ್ತ ನೌಕರಿಯನ್ನರಸಿಕೊಂಡು ಪಟ್ಟಣಗಳ ಕಡೆ ಧಾವಿಸುತ್ತಾನೆ. ಪಟ್ಟಣ ಜೀವನದ ರುಚಿಕಂಡ ಆತ ಪುನಃ ಹಳ್ಳಿಗೆ ಹಿಂದಿರುಗುವುದು ಸಾಧ್ಯವೇ ಇಲ್ಲದಂತಾಗಿದೆ, ಪಟ್ಟಣದಲ್ಲಿ ಕೇವಲ ಮನೆಗೆ ಸುಣ್ಣ-ಬಣ್ಣ ಬಳಿಯುವವನ ಕೂಲಿ 15ರೂ. ವರೆಗೆ ಏರಿದರೆ, ಶ್ರಮವಹಿಸಿ ಹಳ್ಳಿಯ ವ್ಯವಸಾಯದಲ್ಲಿ ಕೂಲಿಮಾಡುವವನಿಗೆ ೨ರೂ. ೨-೫೦ರೂ. ಗೆ ಹೆಚ್ಚಿಲ್ಲ. ಒಬ್ಬ ಬ್ಯಾಂಕಿನ ಆಳಿಗೇ ಜವಾನನಿಗೆ, ಫ್ಯಾಕ್ಟರಿಯಲ್ಲಿ ಕಸಗುಡಿಸುವವನಿಗೆ ೩೦೦ರಿಂದ ೪೦೦ರೂ. ವರೆಗೆ ಸಂಬಳ ಮಾಸಿಕವಾಗಿ ಸಿಕ್ಕುತ್ತದೆ. ಇದನ್ನೇ ಮೂಲಮಾನವಾಗಿ ಲೆಕ್ಕ ಹಾಕಿದರೆ ವ್ಯವಸಾಯಗಾರನ ಕೂಲಿ ಐದನೇ ಒಂದು ಭಾಗಕ್ಕಿಂತಲೂ ಕಡಿಮೆ. ನೌಕರ ಕೇವಲ ಒಬ್ಬನೇ ದಿನಕ್ಕೆ ಎಂಟು ಘಂಟೆ ಕೆಲಸ ಮಾಡಿದರಾಯಿತು. ಇವನಿಗೆ ಮಳೆಯಿಲ್ಲದ ಬೆಳೆ ಎನ್ನುತ್ತಾನೆ ರೈತ. ೪೦೦ರೂ. ಸಂಬಳದವನಿಗೆ ೪೮೦೦ರೂ. ವಾರ್ಷಿಕ ಆದಾಯ. ಈ ಆದಾಯದಲ್ಲಿ ೫೦–೫೫ ಪಲ್ಲದಷ್ಟು ರಾಗಿಯನ್ನಾಗಲಿ ಅಥವಾ ೭೦-೮೦ ಪಲ್ಲದಷ್ಟು ಹೈಬ್ರಿಡ್ಜ್ ಜೋಳವನ್ನಾಗಲಿ ೪ ಕ್ವಿಂಟಾಲ್ ಬೆಲ್ಲವನ್ನಾಗಲಿ ಬೆಳೆದಂತೆಂದು ರೈತನ ಲೆಕ್ಕಾಚಾರ. ಇಷ್ಟು ಬೆಳೆಯನ್ನು ಬೆಳೆಯಲು ಒಬ್ಬ ರೈತ ಪಡುವ ಶ್ರಮ ಅಗಣಿತ. ಅದಕ್ಕೆ ತಕ್ಕ ಎತ್ತು, ಗಾಡಿ, ಗೊಬ್ಬರ, ಮಳೆಚಳಿಯೆನ್ನದೆ ಮನೆಮಂದಿಯೆಲ್ಲ ಪಡುವ ಶ್ರಮ. ದನಕರುಗಳ ಆರೈಕೆ ಈ ಎಲ್ಲದರ ಹಿನ್ನೆಲೆಯಲ್ಲಿ ಯೋಚಿಸಿದಾಗ ವ್ಯವಸಾಯವೃತ್ತಿ ಬುದ್ಧಿಹೀನನ ವೃತ್ತಿಯೆಂದೇ ಪರಿಗಣಿತವಾಗಿ ಹೋಗಿದೆ. ನೀರಾವರಿಯ ಸೌಕರ್ಯವಿದ್ದರೇನೋ ಈ ಎಣಿಕೆ ಸ್ವಲ್ಪ ಸ್ವಲ್ಪ ರಿಯಾಯಿತಿ ತೋರೀತು. ನಮ್ಮ ದೇಶದಲ್ಲಿ ನೀರಾವರಿ ಸೌಕರ್ಯವಾದರೂ ಎಷ್ಟು ಜನಕ್ಕೆ ಲಭ್ಯವಾಗಿದೆ? ಈ ಎಲ್ಲ ಕಾರಣಗಳಿಂದ ಶ್ರಮಜೀವಿಯಾದ ರೈತ, ಅವನನ್ನಾಶ್ರಯಿಸಿರುವ ಕೂಲಿಕಾರವರ್ಗ, ನಿಟ್ಟುಸಿರು ಬಿಡುತ್ತ ‘ದೇಶದ ಐಶ್ವರ್ಯವನ್ನು ಬುದ್ಧಿವಂತರೇ ಹಂಚಿ ತಿನ್ನುತ್ತಿದ್ದಾರೆ’ ಎನ್ನುತ್ತಿದ್ದಾನೆ. ಸಣ್ಣ ಹಿಡುವಳಿದಾರರಂತೂ ವ್ಯವಸಾಯ ಮಾಡಿ ಅದರಿಂದ ಜೀವಿಸುತ್ತೇವೆಂಬ ನಂಬುಕೆ ದೂರವಾಗಿ ಹೋಗಿವೆ. ಅವನು ಬೇರೆಯವರಿಗೆ ತನ್ನ ಜಮೀನು ಕೊಡುವಂತಿಲ್ಲ, ತಾನೂ ಮಾಡುವಂತಿಲ್ಲ–ಈ ಎಲ್ಲ ಸಮಸ್ಯೆಗಳ ಹಿನ್ನೆಲೆಯಲ್ಲಿ ನಮ್ಮ ದೇಶದ ಆರ್ಥಿಕ ವ್ಯವಸ್ಥೆ ತೀರಾ ಹದಗೆಟ್ಟು ಹೋಗಿದೆ ಎಂದು ಹೇಳದೆ ವಿಧಿಯಿಲ್ಲವಾಗಿದೆ.

ಇನ್ನೊಂದು ಮಹಾ ಸಮಸ್ಯೆಯೆಂದರೆ ಅಶಿಸ್ತು. ಇಂದಿನ ಜೀವನದಲ್ಲಿ ಅಶಿಸ್ತೇ ಶಿಸ್ತಾಗುವಷ್ಟು ಮಟ್ಟಿಗೆ ಅದು ಬೆಳೆದುಹೋಗಿದೆ. ಅಶಿಸ್ತುಗಳಲ್ಲಿ ರಾಜಕೀಯ ಅಶಿಸ್ತು, ವಿದ್ಯಾರ್ಥಿಗಳ ಅಶಿಸ್ತು, ಸಮಾಜ ಸಮಾಜಗಳ ಹೊಂದಾಣಿಕೆ ತಪ್ಪಿದ ಅಶಿಸ್ತು, ಸಾಹಿತ್ಯ ಕ್ಷೇತ್ರದಲ್ಲಿನ ಅಶಿಸ್ತು ಎಲ್ಲವೂ ಸೇರಿವೆ. ನೆಮ್ಮದಿಯಿಂದ ಬಾಳುವ ಪುಣ್ಯವೇ ನಮ್ಮ ಹಣೆಯಲ್ಲಿ ಬರೆದಿಲ್ಲವೇನೋ ಎನ್ನುವಷ್ಟರಮಟ್ಟಿಗೆ ಶಾಂತಿಪ್ರಿಯ ಸಂಸ್ಕಾರ ಜೀವಿಗಳು ಕೊರಗುತ್ತಿದ್ದಾರೆ. ಮುಖ್ಯವಾಗಿ ವಿದ್ಯಾರ್ಥಿಗಳ ಅಶಿಸ್ತು ಕುತ್ತಕ್ಕೊಳಗಾಗಿದೆ. ಶ್ರದ್ಧೆಯಿಂದ ವಿದ್ಯಾಭ್ಯಾಸ ಮಾಡಬೇಕೆಂಬ ಶಾಂತಿಪ್ರಿಯ ವಿದ್ಯಾರ್ಥಿಗಳನ್ನು ಕೆಲವೇ ಜನ ಅಶಿಸ್ತಿನ ವಿದ್ಯಾರ್ಥಿಗಳು ದಾರಿತಪ್ಪಿಸುತ್ತಿದ್ದಾರೆಂದು ಬಹುಜನಗಳ ಅಭಿಪ್ರಾಯ. ಎಲ್ಲಿ ಶಿಸ್ತು, ಸಂಯಮ, ಕರ್ತವ್ಯ ಶ್ರದ್ಧೆ ಮುಂತಾದ ಸದ್ಗುಣಸಂಪನ್ನತೆ ಗಳಿಸಬೇಕೋ ಅಂಥ ವಿದ್ಯಾಸಂಸ್ಥೆಗಳಲ್ಲಿ ಆಗಿಂದಾಗ ತಲೆದೋರುವ ಮುಷ್ಕರ, ದೊಂಬಿ, ಗಲಾಟೆಗಳು ವಿಚಾರಜೀವಿಗಳಿಗೆ ಪ್ರಬಲ ಆತಂಕಗಳಾಗಿವೆ; ಕೆಲವು ದಿನ ವಿದ್ಯಾಸಂಸ್ಥೆಗಳನ್ನೇ ಮುಚ್ಚಿಬಿಟ್ಟರೆ ಹೇಗೆ? ಎಂದು ಯೋಚನೆ ಮಾಡುವಷ್ಟು ಉಲ್ಬಣಕ್ಕೆ ಈ ಸಮಸ್ಯೆ ಹೋಗಿದೆ. ಕೆಲವೇ ಜನ ಒಗ್ಗಟ್ಟಾಗುತ್ತಾರೆ. ವಿಧ್ವಂಸಕ ಕಾರ್ಯಕ್ಕೆ ತೊಡಗಿ ಉಳಿದ ವಿದ್ಯಾರ್ಥಿಗಳನ್ನು ಆ ಮಾರ್ಗಕ್ಕೆ ಎಳೆಯುತ್ತಿದ್ದಾರೆಂಬುದೇ ಈ ಅಶಿಸ್ತಿನ ಹಿನ್ನೆಲೆಯ ಗುಟ್ಟೆಂದು ತಿಳಿದುಬರುತ್ತಿವೆ.. ಹೀಗಾದರೆ ಯಾರಿಗೆ ಕ್ಷೇಮ. ತಮ್ಮ ಶಕ್ತಿಯನ್ನು ಗಳಿಸಿಕೊಳ್ಳುವ ಪ್ರಬಲಾತ್ಮರ, ಶ್ರದ್ಧೆಗಳ ಸ್ಥಾನದಲ್ಲಿ ವಿನಾಶಕಾರಕ ಯೋಚನೆಗಳ ಕೊಳೆಯನ್ನು ಶಾಲೆಯಲ್ಲಿ ವಿದ್ಯಾರ್ಥಿಗಳು ತುಂಬಿ ತಮ್ಮ ಅಮೂಲ್ಯ ಶಕ್ತಿಯನ್ನು ನಷ್ಟಗೊಳಿಸಿಕೊಂಡರೆ ಅದು ರಾಷ್ಟ್ರೀಯ ಸಂಪತ್ತಿನ ಅಪವ್ಯಯವಾಗುವುದಿಲ್ಲವೆ ? ಇದನ್ನರಿತು ವಿದ್ಯಾರ್ಥಿಗಳು ಈ ವಿನಾಶಕಾರಕ ಮಾರ್ಗವನ್ನು ತ್ಯಜಿಸಿ ಒಬ್ಬರನ್ನೊಬ್ಬರು ಪ್ರೀತಿಸುವ, ತಮ್ಮ ಸಮಸ್ಯೆಗಳನ್ನು ಶಾಂತರೀತಿಯಿಂದ ಬಗೆಹರಿಸಿಕೊಳ್ಳುವ ವಿವೇಕಯುಕ್ತ ಮಾರ್ಗವನ್ನು ಅನುಸರಿಸುವುದು ತಮಗೂ ಕ್ಷೇಮ; ರಾಷ್ಟ್ರಕ್ಕೂ ಕ್ಷೇಮ. ಇಲ್ಲದಿದ್ದರೆ ವಿನಾಶಕ್ಕೆ ಆಹ್ವಾನವಿತ್ತಂತೆಯೇ. ಇಷ್ಟೆಲ್ಲ ಸಮಸ್ಯೆಗಳು ಎಂದೂ ಇಲ್ಲದ ರಾಜಕೀಯ ಜಾತಿ, ವರ್ಗಗಳ ಸೋಂಕು ಸಾಹಿತ್ಯ ಕ್ಷೇತ್ರಕ್ಕೂ ಹರಡುತ್ತಿರುವ ವಿನಾಶಕಾರೀ ಸಮಸ್ಯೆ ಬರೆಯುವವನ ಜಾತಿ, ನಂಬಿರುವ ರಾಜಕೀಯ ಸಿದ್ಧಾಂತಗಳ ಸೋಂಕಿನಿಂದ ಸಾಹಿತ್ಯ ದೂರವಿರಬೇಕೆಂದು ಜಗನೇ ಸಾಹಿತ್ಯ ಸಮ್ಮೇಲನಾಧ್ಯಕ್ಷ ಶ್ರೀ ಅಡಿಗರು ಧರ್ಮಸ್ಥಳದಲ್ಲಿ ಘೋಷಿಸಿರುವುದು ಸಮಯೋಚಿತವಾಗಿದೆ.

ಈ ವರ್ಷ ಶ್ರೀ ಸಿದ್ಧಗಂಗಾ ಕ್ಷೇತ್ರದ ಶಿವರಾತ್ರಿ ಮಹೋತ್ಸವದ ಜಾತ್ರೆ, ವ್ಯವಸಾಯ ಮತ್ತು ಕೈಗಾರಿಕಾ ವಸ್ತುಪ್ರದರ್ಶನ, ರಥೋತ್ಸವ, ಬೆಳ್ಳಿಪಲ್ಲಕ್ಕಿ ಮಹೋತ್ಸವ ದನಗಳ ಪ್ರದರ್ಶದಗಳೊಡನೆ ಅತ್ಯಂತ ವಿಜೃಂಭಣೆಯಿಂದ ನೆರವೇರಿದುದೊಂದು ಸಂತೋಷದ ಸಂಗತಿ. ಶ್ರೀಗಳವರು ಯಾತ್ರಾರ್ಥಿಗಳಿಗೆ ಪ್ರತಿವರ್ಷದಂತೆ ಪ್ರಸಾದ ವಿತರಣೆ, ಮನರಂಜನೆ ಕಾರ್ಯಕ್ರಮಗಳನ್ನು ಯಥಾಸಾಂಗವಾಗಿ ನೆರವೇರಿಸಿ ಎಲ್ಲ ಭಕ್ತಕೋಟಿಯ ಭಕ್ತಿಪೂರ್ವಕ ಕೃತಜ್ಞತೆಗೆ ಪಾತ್ರರಾಗಿದ್ದಾರೆ.

ಶ್ರೀ ಕ್ಷೇತ್ರದ ದಾಸೋಹಕ್ಕೆ ಶ್ರದ್ಧಾಭಕ್ತಿಯಿಂದ ಬೆಲೆಬಾಳುವ ತಮ್ಮ ಸರ್ವಸೊತ್ತನ್ನು ದಾನಮಾಡಿ ಶ್ರೇಷ್ಠ ವರ್ಗದ ದಾನಿಗಳೆನಿಸಿದ್ದ ಭೈರಮ್ಮಾಜಿಯವರು ತಾ|| 29-1-79ರಂದು ಸ್ವರ್ಗಸ್ಥರಾದರು. ಶ್ರೀ ಶ್ರೀಗಳವರು ಅವರ ಅಂತ್ಯಕ್ರಿಯೆಯನ್ನು ನೆರವೇರಿಸಿದರು. ಶ್ರೀ ಕ್ಷೇತ್ರದಲ್ಲಿಯೇ ಮೃತರ ಆತ್ಮಕ್ಕೆ ಸಿದ್ಧಗಂಗಾ ಪತ್ರಿಕೆ ಶಾಂತಿಯನ್ನು ಬಯಸುತ್ತದೆ.

ಮೊನ್ನೆ ಫಾಲ್ಗುಣ ಶುದ್ಧ ಹುಣ್ಣಿಮೆಯಂದು ಚಂದ್ರನಿಗೆ ಹಿಡಿದ ಗ್ರಹ ಸಾರಸ್ವತ ಲೋಕಕ್ಕೂ ಬಡಿಯಿತು. ತತ್ಪರಿಣಾಮವಾಗಿ ಮಹಾನ್ ವ್ಯಕ್ತಿಗಳಿಬ್ಬರು ನಿಧನರಾದರು. ಸುಪ್ರಸಿದ್ಧ ಸಾಹಿತಿಗಳೂ, ಸಂಗೀತ ವಿದ್ವಾಂಸರೂ ಆದ ರಾಳ್ಳಪಲ್ಲಿ ಅನಂತ ಕೃಷ್ಣಶರ್ಮರ ನಿಧನ ವಾರ್ತೆಯನ್ನು ಕೇಳಿ ಕಣ್ಣೀರು ಒರೆಸಿಕೊಳ್ಳುವಷ್ಟರಲ್ಲಿಯೇ ಕನ್ನಡದ ರತ್ನ ರಾಜರತ್ನಂ ನಮ್ಮನ್ನಗಲಿ ಹೋದರು. ಆ ಮೃತರೀರ್ವರ ಆತ್ಮಕ್ಕೆ ದಯಾಮಯನಾದ ಪರಮಾತ್ಮನು ಶಾಂತಿಯನ್ನು ದಯಪಾಲಿಸಲೆಂದು 'ಸಿದ್ಧಗಂಗಾ' ಆಶಿಸುತ್ತದೆ.



# ನವನೀತ

1 ದೇಹದಂಡನ ಮಾತ್ರೇಣ ಕಾಮುಕ್ತಿರವಿವೇಕಿನಾಂ |
ವಲ್ಮೀಕ ತಾಡನಾದೇವ ಮೃತಃ ಕುತ್ರ ಮಹೋರಗಃ ||

ಶರೀರವನ್ನು ಉಪವಾಸ, ವ್ರತಗಳಿಂದ ಬಳಲಿಸಿದ
ಮಾತ್ರದಿಂದ ಅವಿವೇಕಿಗಳಿಗೆ ಮೋಕ್ಷಬರುವುದೇ ?
ಹುತ್ತವನ್ನು ಬಡಿದರೆ ಹಾವುಸಾಯುತ್ತದೆಯೇ ?



2 ದೃಷ್ಟಿಪೂತಂ ನ್ಯಸೇತ್ಪಾದಂ ವಸ್ತ್ರಪೂತಂ ಜಲಂ ಪಿಬೇತ್ |
ಸತ್ಯಪೂತಾಂ ವದೇದ್ವಾಚಂ ಮನಃ ಪೂತಂ ಸಮಾಚರೇತ್ ||

ಕಣ್ಣಿನಿಂದ ನೋಡಿ ಹೆಜ್ಜೆಯಿಡಬೇಕು, ಬಟ್ಟೆಯಿಂದ
ಶೋಧಿಸಿ ನೀರನ್ನು ಕುಡಿಯಬೇಕು.
ಸತ್ಯದಿಂದ ಶುದ್ಧವಾದ ಮಾತನ್ನಾಡಬೇಕು.
ಮನಸ್ಸಿನಿಂದ ಪವಿತ್ರವಾದ ಕೆಲಸಮಾಡಬೇಕು.



3 ಯಸ್ಯ ಕೃತ್ಯಂ ನವಿಘ್ನಂತಿ ಶೀತಮುಷ್ಣಂ ಭಯಂ ರತಿಃ |
ಸಮೃದ್ಧಿರಸಮೃದ್ಧಿರ್ವಾ ಸವೈ ಪಂಡಿತ ಉಚ್ಯತೇ ||

ಯಾರ ಕೆಲಸಕ್ಕೆ ಚಳಿ, ಸೆಕೆ, ಭಯ, ಪ್ರೀತಿ,
ಸಂಪತ್ತು, ಬಡತನಗಳು ಯಾವುವೂ ಅಡ್ಡಿ ಮಾಡ
ಲಾರವೋ ಅವನನ್ನು ಪಂಡಿತನೆನ್ನುತ್ತಾರೆ.



## ಅಮೃತ ಬಿಂದು

ಯುಗ ಯುಗ ಕಳೆದರೂ ಯುಗಾದಿ
ಮರಳಿ ಬರುತಿದೆ |
ಹೊಸವರುಷಕೆ ಹೊಸ ಹರುಷದಿ
ಹೊಸತು ಹೊಸತು ತರುತಿದೆ ||

ಎಂಬ ಜನಪ್ರಿಯ ಕವನವನವು ಯುಗಾದಿಯ ಮಹಿಮೆಯನ್ನು ಸಾರುತ್ತದೆ "ಬ್ರಹ್ಮ ದೇವರು ಚೈತ್ರ ಶುದ್ಧ ಪ್ರತಿ ಪದೆಯ (ಯುಗಾದಿಯ) ದಿನವೇ, ಈ ಲೋಕಗಳನ್ನು ಸೃಷ್ಟಿಸುವ ಕಾರ್ಯವನ್ನು ಪ್ರಾರಂಭಿಸಿದನು"–ಎಂದು ಬ್ರಹ್ಮಾಂಡ ಪುರಾಣದಲ್ಲಿ ವರ್ಣಿಸಲಾಗಿದೆ. ಹಿಂದೂ ಪಂಚಾಂಗದ ಪ್ರಕಾರ, ಯುಗಾದಿಯಿಂದ ಹೊಸ ವರುಷ ಪ್ರಾರಂಭವಾಗುತ್ತದೆ. ಚಾಂದ್ರಮಾನ, ಸೌರಮಾನಗಳ ಆಧಾರದಿಂದ, ಭಾರತೀಯರು ಬಹಳ ಆಳವಾಗಿ ಸಂಶೋಧನೆನಡೆಸಿ, ಕಾಲಗಣನೆ ಮಾಡಿದ್ದಾರೆ. ಮಳೆ ಚಳಿಗಳಿಂದ ಕೊಳೆಯಾಗಿ ಬರಡಾದ ನಿಸರ್ಗವು ಚಿಗುರೊಡೆದು ನವ ಚೇತನವನ್ನು ನೀಡುವ ಕಾಲವನ್ನು ಯುಗದ ಆದಿ ಎಂದೇ ಕರೆದಿದ್ದಾರೆ. ಹಿಂದಿನ ವರ್ಷ ಅನುಭವಿಸಿದ ಬಾಳಿನ ಗೋಳನ್ನೆಲ್ಲ ಕಳೆದು ; ಯುಗಾದಿಯು ನಮ್ಮ ಜೀವನದಲ್ಲಿ, ಭಾಗ್ಯದ ನವೋದಯವನ್ನುಂಟು ಮಾಡುವುದೆಂದೂ ನಂಬಿದ್ದಾರೆ. ವರ್ಷದ ಮೂರುವರೆ ಶುಭದಿನಗಳಲ್ಲಿ ಯುಗಾದಿಯೂ ಒಂದಾಗಿದೆ. ಯಾವದೇ ಹೊಸ ಕಾರ್ಯ ಪ್ರಾರಂಭಿಸಲು ಈ ದಿನವು ಶುಭ ದಾಯಕವಾಗಿದೆ. ಬೇವು ಕಹಿ, ಬೆಲ್ಲ ಸಿಹಿ, ಅದರಂತೆ ಈ ಜೀವನವೆ, ಸಿಹಿ ಕಹಿಗಳ ಸಂಗಮವಾಗಿದೆ, ಎಂಬ ಸಂಕೇತವನ್ನು ತಿಳಿಸುವ, ಪವಿತ್ರ ದಿನವೂ ಹಾಗಿದೆ.

—ದುಂಬಿ

# ಹಿಂದು "ಶಬ್ದದ ವಿವೇಚನೆ"

ವೇದೋಪನಿಷತ್ತುಗಳ ಮಾತಿರಲಿ; ಉಪವೇದಗಳು ವೇದಾಂಗಂಗಳು-ಬ್ರಾಹ್ಮಣ ಗ್ರಂಥಗಳು ಕಲ್ಪ ಸೂತ್ರಗಳು,-ಯೋಗಶಾಸ್ತ್ರ--ದರ್ಶನಗಳು--ಹಾಗೂ ಲೋಕ ವಿಖ್ಯಾತವಾದ ಗೀತೆಯನ್ನೂ ಸಹಾ ದುರ್ಬೀನು ಇಟ್ಟು ನೋಡಿರಿ; ರಾಮಾಯಣ, ಭಾರತ, ಭಾಗವತಗಳನ್ನು ಮಗುಚಿ ಹಾಕಿರಿ; ಇನ್ನು ಹದಿನೆಂಟು ಪುರಾಣಗಳು; ಹದಿನೆಂಟು ಉಪಪುರಾಣಗಳನ್ನು ತಿರುವಿಹಾಕಿರಿ; ಇದಲ್ಲದೆ ೨೫೦೦ ವರುಷಗಳ ಹಿಂದೆ ರಚಿತವಾದ ಯಾವುದೇ ಗ್ರಂಥಗಳನ್ನು ನಾಟಕಗಳನ್ನು ಪರಿಶೀಲಿಸಿ; ಎಲ್ಲಿಯಾದರೂ 'ಹಿಂದು' ಶಬ್ದದ ಉಲ್ಲೇಖವಿಲ್ಲ. 'ಹಿಂದೂಧರ್ಮ' ಎಂದು ಕರೆಯಲ್ಪಡುವ ಒಂದು ಧರ್ಮವೂ ಇಲ್ಲ. ಎಲ್ಲಿಂದ ಬಂತಿದು ?ಹಿಂದುಳಿಯಲಿಕ್ಕಾಗಿಯೇ ನಿರ್ಮಾಣವಾದ ಈ ಹಿಂದೂಶಬ್ದ ? ಪಾರಸೀಭಾ ಕೋಶದಲ್ಲಿ ಚೋರ, ನಂಬಿಕೆ--ದ್ರೋಹಿ, ಗುಲಾಮ, ದರೋಡೆಕೋರ, ಡಾಕು, ದಸ್ಯು ಎಂಬ ಕ್ಷುದ್ರವಾದ ಅರ್ಥವನ್ನು ಬಳಸಿದ್ದಾರೆ. ಇದಕ್ಕನು ಸಾರ ಹಿಂದೂ ಜನಾಂಗದಲ್ಲಿ-ಸಾವಿರಾರು ಜಾತಿ ಉಪಜಾಗಳು. ಬೇರೆ ಬೇರೆ ವರ್ಗಗಳು, ಲೆಕ್ಕವಿಲ್ಲದ ದೇವತೆಗಳು, ಧರ್ಮಗಳು, ನಮ್ಮನ್ನು ಯಾವ ಕಾಲಕ್ಕೂ ಒಂದಾಗದಂತೆ, ಈ ತನಕ ಪಟ್ಟ ಸಂಕಷ್ಟಗಳು ಪಡುತ್ತಿರುವ ಬಾಧೆ ಹೇಳತೀರದು. ಹೆಸರಿನಲ್ಲಿಯೂ ಒಂದು ಮಹತ್ವವಿದೆ. ನಾಮಕರಣ ಸಂಸ್ಕಾರಕಾಲದಲ್ಲಿ ನಮ್ಮ ಮಕ್ಕಳಿಗೆ ಅರ್ಥಗರ್ಭಿತವಾದ ಉತ್ತಮ ಹೆಸರನ್ನೇ ಇಡುವ ಪರಿಪಾಠವಿದೆ. ಆದಕಾರಣ ಮಾನವ ಜನಾಂಗಕ್ಕೂ ಯಾವದಾದರೂ ಉತ್ತಮ ಹೆಸರಿರಲೇ ಬೇಕು.

ವೇದಾದಿ ಸಮಸ್ತ ಶಾಸ್ತ್ರಗಳಲ್ಲಿಯೂ ಎಲ್ಲಾ ಗ್ರಂಥಗಳಲ್ಲಿಯೂ ಈ ಜನಾಂಗಕ್ಕೆ ಸಂಬೋಧಿಸಲ್ಪಡುವ ಹೆಸರು 'ಆರ್ಯ' ಎಂದಾಗಿದೆ. ಇದರ ವ್ಯಾಖ್ಯೆ ಹೀಗಿದೆ.

"ಆರ್ಯ-ಇತಿ ಈಶ್ವರನಾಮಃ ತಸ್ಯ ಪುತ್ರ ಆರ್ಯ" ಎಂದರೆ ವೇದಗಳಲ್ಲಿ ಪರಮಾತ್ಮನನ್ನು "ಆರ್ಯ" ನೆಂದೂ, ಆತನ ಮಕ್ಕಳಾದ ಮಾನವ ಜನಾಂಗವನ್ನು 'ಆರ್ಯ' ಎಂದೂ ಸಂಬೋಧಿಸಲಾಗಿದೆ. ಈ ಶಬ್ದದ ಅರ್ಥವೇನು? ಮುಖ್ಯಾರ್ಥ ಶ್ರೇಷ್ಠ ; ಎಂದಾಗಿದೆ. ಇದಲ್ಲದೆ ಪರಮಾತ್ಮನ ಪುತ್ರ, ಪುರುಷಸಿಂಹ, ಸತ್ಯವಂತ, ಧರ್ಮಾತ್ಮ-ಸಾಹಸಿ, ಸದ್ಗುಣಭರಿತ ಪ್ರಾಜ್ಞ, ಇತ್ಯಾದಿ ಅನೇಕ ಅರ್ಥಗಳಿಂದ ಶೋಭಿಸುವ ಈ-'ಆರ್ಯ' ಶಬ್ದವನ್ನು ನಾವೇಕೆ ಮೂಲೆಪಾಲು ಮಾಡಬೇಕು. ಆರ್ಯಾವರ್ತವೆಂದೂ ಕರೆಯಲ್ಪಡುವ ಈ ದೇಶವಲ್ಲದೆ, ಹೊರಗಿನ ಅನೇಕ ದೇಶದ ಜನರೂ ಸಹಾ ತಮ್ಮನ್ನು 'ಆರ್ಯ'ರೆಂದೇ ಹೇಳಿಕೊಳ್ಳುತ್ತಿದ್ದಾರೆ. ಹೀಗಿರುವಾಗ ನಾವು ನಾಚಿಕೆ ಪಡಬೇಕ್ಯಾತಕ್ಕೋ ತಿಳಿಯದು. ಅನೇಕ ವಿದ್ಯಾವಂತರು, ಬಳಕೆಯಲ್ಲಿರುವ ತಮ್ಮ ಹೆಸರುಗಳನ್ನು ಪ್ರಾಯ ಬಂದಮೇಲೆ, ಉತ್ತಮವಾದ ಬೇರೆ ಹೆಸರಿನಿಂದ ಕರೆಸಿಕೊಳ್ಳಲಿಕ್ಕಾಗಿ ಸರಕಾರಕ್ಕೆ ಬರೆದು ಪರಿವರ್ತಿಸಿಕೊಳ್ಳುತ್ತಾರೆ, ಆದ ಕಾರಣ ನಾವು ಇನ್ನು ಮುಂದೆ ನಡೆಯತಕ್ಕ ಮಹಾ ಚುನಾವಣಾಕಾಲದಲ್ಲಿ ಜಾತಿ ಉಪಜಾತಿಗಳು ಹರಿಜನ, ಗಿರಿಜನ, ಹಿಂದುಳಿದ ವರ್ಗ ಇತ್ಯಾದಿ ಯಾವ ವರ್ಗವನ್ನೂ ಉಲ್ಲೇಖಿಸದೆ ಒಂದೇ ಒಂದಾದ 'ಆರ್ಯ' ವೆಂಬ ಶಬ್ದವನ್ನೇ ಉಪಯೋಗಿಸಿ ನಮ್ಮ ಐಕ್ಯತೆ ಸಾಧಿಸೋಣ. ಹಿಂದೂ ಶಬ್ದ ಬಹಳ ಸಂಕುಚಿತವಾಗಿದೆ. ವ್ಯಾಪಕಾರ್ಥವನ್ನು ಹೊಂದಿಲ್ಲ. ನಿರ್ದಿಷ್ಟವಾದ ಒಂದು ಜಾತಿಯ ಪ್ರತ್ಯೇಕತೆಯನ್ನು ಸೂಚಿಸುತ್ತದೆ.

ಯಾವ ರೀತಿ ರಾಷ್ಟ್ರದ ಸಮಗ್ರ ಐಕ್ಯತೆಗೆ, ಒಂದೇ ರಾಷ್ಟ್ರಧ್ವಜ, ಒರ್ವನೇ ಪ್ರಧಾನಿ, ಒಂದೇ ರಾಷ್ಟ್ರದ ಭಾಷೆ ಎಷ್ಟು ಮುಖ್ಯವೋ ಮಾನವ ಜನಾಂಗದ ಐಕ್ಯತೆಗಾಗಿ ಒಬ್ಬನೇ ದೇವರು, ಒಂದೇ ಜಾತಿ ಒಂದೇ ಧರ್ಮ-ಅಷ್ಟೇ ಮುಖ್ಯವೆಂಬುದನ್ನು ನಾವು ತಿಳಿದರೆ ನಮ್ಮ ಕಲ್ಯಾಣವೂ-ನಮ್ಮ ದೇಶದ ಕಲ್ಯಾಣವೂ ಬಹುಬೇಗವಾಗುವುದರಲ್ಲಿ ಸಂದೇಹವೇಇಲ್ಲ. ಯಾವ ಮತ ಗ್ರಂಥಗಳಲ್ಲಿಯೂ "ಮನುರ್ಭವ" ಮಾನವನಾಗು ಎಂದು ಹೇಳಲಿಲ್ಲ--ಪವಿತ್ರವಾದ ವೇದಗಳಲ್ಲಿ ಮಾತ್ರ ಈ ರೀತಿ ಹೇಳಲಾಗಿದೆ.

(25 ನೇ ಪುಟ ನೋಡಿ)



# "ಜನಪದ ಸಾಹಿತ್ಯದಲ್ಲಿ ಶರಣಧರ್ಮ"

--ದಾಕ್ಷಾಯಣಿ ಪುಟ್ಟಸ್ವಾಮಿ

ಧರ್ಮ ಎಂದರೆ ಜಗತ್ತನ್ನೇ ಧರಿಸಿರುವಂತಹುದು. ಎತ್ತಿ ಹಿಡಿದಿರುವಂತಹುದು, ಅಥವಾ ಧರ್ಮ ಎಂದರೆ ಪಾಲಿಸುವಂತಹುದು. ('ಧೃ' ಎಂದರೆ ಪಾಲಿಸುವಂತಹುದು, ಎತ್ತಿ ಹಿಡಿಯುವಂತಹುದು, ಇದು ಯಾವುದೇ ವ್ಯಕ್ತಿಯ ಹಿಡಿತದಲ್ಲಿರುವುದಿಲ್ಲ. ಕಾಲ ಬದಲಾದಂತೆ 'ಧರ್ಮ'ದ ಅರ್ಥ ವ್ಯಾಪ್ತಿಯಾಗುತ್ತಿದೆ. ವ್ಯಕ್ತಿಯಿಂದ ವಿಶ್ವದವರೆವಿಗೂ ಈ ಧರ್ಮದ ವ್ಯಾಪ್ತಿಯಿರುತ್ತದೆ.

ಜನಪದ ಸಾಹಿತ್ಯ, ಜನಸಾಮಾನ್ಯರ ಜೀವನವೇ ಹಾಡಾದಾಗ ಮೂಡಿಬಂದದ್ದು. ಜನಪದ ಸಾಹಿತ್ಯ ಶಿಷ್ಟಸಾಹಿತ್ಯವನ್ನು ಆಳವಾಗಿ ಸೋಸಿ, ಬದುಕಿನ ಬೇಸರವನ್ನು ಕಳೆಯಲೊ, ಭಕ್ತಿಗಾಗೋ ಮನದುಂಬಿ ಹಾಡುವಾಗ, ಐತಿಹಾಸಿಕ ಘಟನೆಗಳಿರಬಹುದು. ಹಳ್ಳಿಯ ಬಾಳಿನ ಒಗ್ಗರಣೆಯಿರಬಹುದು ; ಶರಣರ ಸತ್ಯಕತೆ ಇರಬಹುದು. ಈ ರೈತನು "ಹಲಗೆ ಬಳಪವಿಡಿಯದ ಗಾಂಪ" ಆದರೂ "ಕುರಿತೋದದ ಕಾವ್ಯಪ್ರಯೋಗ ಪರಿಣತಮತಿ" ಈತನು ಶರಣರನ್ನು ಹಾಡದೆ, ಹಂತಿ ಹೊಡೆಯಲಾರ. ಶರಣರ ಭಕ್ತಿಯೇ ಅವನ ಬಾಳಿನ ಸ್ಫೂರ್ತಿ.

ಶರಣ ಮಾನವಧರ್ಮದ ಪ್ರತಿಮೂರ್ತಿ. ತಾನು ನಡೆದು ಅನ್ಯರಿಗೆ ಹೇಳುವಾತ. ಈ ಧರ್ಮವನ್ನು ಅರಿತವನು ಶರಣ, ಮರೆತವನು ಮಾನವ. ಶರಣರ ಬದುಕೆಂದರೆ ಕಾಯಕ, ದಾಸೋಹ, ತತ್ವಚಿಂತನ, ತನ್ಮೂಲಕ ಅರಿವಿನ ಲಾಭ. ಆದ್ದರಿಂದ ಇವರು ನಡೆದದ್ದೆ ಮಾರ್ಗ, ನುಡಿದದ್ದೇ ವೇದವಾಕ್ಯ ಮೂಲತಃ ಶರಣನಿಗಿರಬೇಕಾದುದು ಈಶ್ವರನಲ್ಲಿಯ ನಂಬಿಕೆ, ಇದೇ ಭಕ್ತಿ. ಇದು ಅನುಭವ ಭಕ್ತಿಯಿರಬಹುದು, ಮುಗ್ಧ ಭಕ್ತಿಯಿರಬಹುದು. ಜನಪದ ಕವಿಗಳೂ ಅಷ್ಟೇ ಮುಗ್ಧರು. ತಮ್ಮ ಮಟ್ಟಕ್ಕೆ ಶರಣರನ್ನು ಇಳಿಸಿಕೊಂಡರು. ಈ ಕವಿಗೆ ಮುಗ್ಧ ಶರಣರ ಹಾಡೆಂದರೆ ಪಂಚಪ್ರಾಣ.

ಮುಗ್ಧ ಶರಣರ ಹಾಡು ಸಿದ್ಧಿಮಂತ್ರವು ನೋಡು
ಸಿದ್ಧಾಗು ಹಾಡ ಹಾಡುದಕೆ। ಎಲೆ ಜೀವ
ಶುದ್ಧಾಗಿ ಹೊಂದು ಶಿವಪದವ॥

ಲಿಂಗದಲ್ಲಿನ ಉತ್ಕಟವಾದ ನಂಬಿಕೆಯೇ ಶರಣನ ಮೊದಲ ಹೆಜ್ಜೆ. ಹೀಗೆ ಲಿಂಗವೇ ಗತಿಯೆಂದು ನಂಬಿದ ಶರಣ ಗೊಲ್ಲಾಳ:--

ಲಿಂಗವೇ ಗತಿಯೆಂದು ಪೆಂಗ ಕುರುಬರಿಗಂದ
ಲಿಂಗಯ್ಯ ಮೆಚ್ಚಿ ಹರಸಿದರೆ। ಕುರುಬರಿಗೆ
ಗಂಗ್ಯಾಗಿ ಹೊನ್ನು ಹರಿಯುವುದು॥

**ಗೊಲ್ಲಾಳನ ಕತೆ:**-ಶ್ರೀಗಿರಿಗೆ ಹೋಗುತ್ತಿದ್ದ ಶರಣರಲ್ಲಿ ಗೊಲ್ಲಾಳ ಲಿಂಗದೀಕ್ಷೆಯನ್ನು ಬೇಡಿದ. ಗೊಲ್ಲನಿಗೇಕೆ ಲಿಂಗದೀಕ್ಷೆ ಎಂದು ಅಯ್ಯಗಳು ಉಪಹಾಸ್ಯದಿಂದ ಕುರಿ ಹಿಕ್ಕೆಯನ್ನೇ ಲಿಂಗವೆಂದು ಕೊಟ್ಟರು. ಗೊಲ್ಲಾಳನಿಗೆ ಅದು ಕುರಿ ಹಿಕ್ಕೆಯೆಂದು ಹೇಗಾದರೂ ತಿಳಿದೀತು? ಜಂಗಮನು ಕೊಟ್ಟದ್ದು ಕುರಿ ಹಿಕ್ಕೆಯಾಗಲು ಸಾಧ್ಯವೇ ಇಲ್ಲವೆಂದು ಆತನ ನಂಬಿಕೆ. ಅದನ್ನೇ ಪೂಜಿಸಿದ ಮಳಲ ಲಿಂಗವ ಮಾಡಿ, ಹೊಳೆವ ಹಿಕ್ಕೆಯನಿಟ್ಟು, ತಿಳಿಗೊಳದ ನೀರ ಸಿಂಪಡಿಸಿ, ಕಾಡಪತ್ರೆ, ಕಾಡಹೂಗಳನ್ನು ಓಡ್ಯಾಡಿ ತಂದು ಶಿವಪೂಜೆ ಮಾಡಿದ. ನೊರೆ ಬಂದ ಕುರಿಹಾಲು ಶಿವನಿಗೆ ನೈವೇದ್ಯ ಮಾಡಿದನು. ಕುರಿ ಹಿಕ್ಕೆಗೆ ಹೇಳಿದನು. "ಲಿಂಗಯ್ಯ ಬೆಳಗಿದರೆ ಧರೆಗೆಲ್ಲ ಬೆಳಕು ಹರಿಯುವುದು". ಈತನ ಪೂಜೆ ಉಳಿದವರಿಗೆ ಹುಚ್ಚೆನಿಸಿತು. ಗೊಲ್ಲಾಳನ ತಂದೆಯೂ ಬಂದು, ಇದನ್ನು ನೋಡಿ, ಕುರಿ ಹಿಕ್ಕೆಯನ್ನು ಜಾಡಿಸಿ ಒದ್ದ. ಹರನಿಗೆ ಅಪಮಾನವಾದರೆ ಮುಗ್ಧ ಶರಣ ಸುಮ್ಮನಿರುವನೆ? ತಂದೆಯಾದರೇನು? ಯಾರಾದರೇನು? ಕೊಡಲಿಯಿಂದ ತಂದೆಯ ತಲೆಗೆ ಮಡಗಿಯೇಬಿಟ್ಟ. ಕುರಿಹಿಕ್ಕೆಯನ್ನೊಡೆದು ಶಿವ ಪ್ರತ್ಯಕ್ಷನಾದ. ಶಿವನ ಪರೀಕ್ಷೆಯಲ್ಲಿ ಗೊಲ್ಲಾಳ ತೇರ್ಗಡೆಯಾದ.

ಜನಪದ ಕವಿಗಳಿಗೆ ದೇವರಲ್ಲೂ ಅನುಕಂಪವಿದೆ. ಅವರು ತಿಳಿದಿರುವಂತೆ, ದೇವರಿಗೂ ಚಳಿ, ಮಳೆ, ಗಾಳಿ ತೊಂದರೆಗಳಿವೆ. ದೇವರನ್ನು ಈ ಕಷ್ಟದಿಂದ ಪಾರು ಮಾಡುವುದು ಅವನ ಧರ್ಮ.

ದೇವರನ್ನು ರಕ್ಷಿಸುವಾತನನ್ನು ದೇವರು ರಕ್ಷಿಸುತ್ತಾನೆ. ಇವರಿಗೆ ಧರ್ಮವೇ ದೇವರು, ದೇವರೇ ಧರ್ಮ "ಧರ್ಮೋऽ ರತಿಕ್ಷ ರಕ್ಷಿತಃ" ಎಂಬ ಸೂಕ್ತಿ ಇರುವುದುಂಟು. ಕಲಿತವರ ಸೂಕ್ತಿ ಇದಾದರೆ ಕಾವ್ಯ ಪರಿಣತರಲ್ಲದ, ಗಾಂಪರೆನಿಸಿದವರ ಸೂಕ್ತಿ ಇನ್ನೂ ಹತ್ತಿರ ನಿಂತು ಮಾತನಾಡುತ್ತದೆ.

ಕೂಡಲ ಸಂಗಯ್ಯ ಹೊಳೆಯಾಗ ಹ್ಯಾಂಗಿದ್ದಿ
ಹಳ್ಳೊತ್ತಿ ಸಣ್ಣ ಮಳಲೊತ್ತಿ, ಗಂಗೀಯ
ನೀರೊತ್ತಿ ಲಿಂಗ ನೆನೆದಾವ॥
ಗುಡ್ಡದ ವಾರ್‍ಯಾಗ ಗುಲಗಂಜಿ ಬನದಾಗ
ಒಬ್ಬನೆ ಹ್ಯಾಂಗಿದ್ದಿ ಧರಿಧೂಳ। ನಿನಮುಂದ
ಅಬ್ಬರಿಸಿ ಗಂಗಿ ಹರಿದಾಳ॥

**ಶರಣಧರ್ಮ** :–ದೈವಭಕ್ತಿ ಜನಪದ ಬಾಳಿನ ಕೇಂದ್ರ ಶಕ್ತಿ. ಈ ಮಾತು ಶರಣರಿಗೂ ಅನ್ವಯಿಸುತ್ತದೆ. ಶಿವನಿಗೆ ಹಿತವಾಗಿ ನುಡಿಯುವುದೇ ಶರಣಧರ್ಮ. ಜನ ಮೆಚ್ಚಿ ನಡೆಯಬಾರದು, ಶಿವಮೆಚ್ಚಿ ನಡೆದರೆ ಚಂದವು– ಎಂದು ಶಿಷ್ಟ ಸಾಹಿತ್ಯವು ಹೇಳುತ್ತದೆ. ಆದರೆ "ಸತಿ–ಪತಿಗಳೊಂದಾದ ಭಕ್ತಿ ಹಿತವಪ್ಪುದು ಶಿವಂಗೆ" ಎಂದು ಜನಪ್ರಿಯ ಸಾಹಿತ್ಯ ಸಾರುತ್ತದೆ. ಅದೇ ಶರಣಧರ್ಮವನ್ನು ಜನಪದ ಸಾಹಿತ್ಯ "ಗಂಡ–ಹೆಂಡಿರ ಮನವೊಂದಾದರೆ ನಂದಾದೀಪೋ ಮಲ್ಲಯ್ಯ" ಎಂದು ಹೇಳುತ್ತದೆ.

ಜನಪದ ಶರಣನ ಕಣ್ಣು ಎಲ್ಲೆಲ್ಲೂ ಶಿವತ್ವವನ್ನು, ಶಿವನನ್ನು ಕಾಣುತ್ತದೆ. ಶರಣರಿಗೆ ಶಿವನು,

ಹೂವಿನ್ಯಾಗ ಹುದಿಗ್ಯಾನ ಮೂಲ್ಯಾಗ ಮಲಗ್ಯಾನ
ಮೊಗ್ಗಾಗೆ ಕಣ್ಣ ತೆರೆದಾನ। ಲಿಂಗಯ್ಯ
ನೋಡುತಲೆ ಅರೆ ನಿದ್ದೆ ಸೆ ಬಯಲಾಯ್ತು ॥
ಪಾದ ತೀರ್ಥವ ಸಲಿ ಪಾವನಾಯಿತು ಜನ್ಮ
ರೋಮರೋಮೆಲ್ಲ ರವಿಚಿನ್ನ। ಗುರು ನಿಮ್ಮ
ಪಾದದಲಿ ಕಂಡೆ ಪದದೋಳು ॥

ಈ ತೆರನ ಶಿವಭಕ್ತಿ ಮೂಡಬೇಕಾದರೆ, ಜ್ಞಾನ ಕ್ರಿಯೆಗಳ ಸಿದ್ಧಿಯಿರಬೇಕು. ಈಗ ಈತ ಶರಣ. ಶಿವನ ಸಮಯಕ್ಕಾಗಿ ಈತನ ಹರಣ ಮೀಸಲು. ಶರಣನಿಗೆ ಮರಣವೇ ಮಹಾನವಮಿ. ಶರಣರ ಮಹಿಮೆಯನ್ನು ಮರಣದಲ್ಲಿ ಕಾಣೆಂಬ ಮಾತಿದೆ.

ಹರನ ಭಕ್ತರ ನುಹಿಮೆ ಮರಣದಲಿನೋಡೆಂದ
ಕರುಣೆಯಲಿ ಕಾಣೊ ಶಿವಭಕ್ತಿ ಮಾಚನಿಗೆ
ಹರಸುತಲಿ ಹಾಡಿ ಶಿವಲೋಕ ॥

**ಕಿನ್ನರಿ ಬೊಮ್ಮಯ್ಯನ ಕತೆ** : ಶರಣಧರ್ಮದ ಮುಂದಿನ ಹೆಜ್ಜೆಯೇ ದಯೆ. ದಯವೇ ಧರ್ಮದ ಮೂಲವೆಂದು ಅಣ್ಣನವರು ಸಾರಿದರು. ಜನಪದ ಸಾಹಿತ್ಯದಲ್ಲಿ ಬಂದಿರುವ ಕಿನ್ನರಿ ಬೊಮ್ಮಯ್ಯನ ಕತೆಯಲ್ಲಿ ಪ್ರಾಣಿದಯೆ ಶರಣರ ಗುಣವೆಂದು ತಿಳಿದು ಬರುತ್ತದೆ. ಸೂಳೆಗಾಗಿ ಕುರಿಯೊಂದನ್ನು ಕೊಂಡೊಯ್ಯುತ್ತಿದ್ದ 'ಬೊಜ್ಜ' ಕುರಿ ಹೇಗೋ ತಪ್ಪಿಸಿಕೊಂಡು ಬೊಮ್ಮಯ್ಯನ ಗುಡಿಸಲನ್ನು ಸೇರಿತು, ವಿಷಯ ತಿಳಿದ ಬೊಮ್ಮಯ್ಯ ಕುರಿಯನ್ನುಳಿಸಲು ತಾನು ಕಲಿತ ಕಿನ್ನರಿಯ ವಿದ್ಯೆಯನ್ನು ಉಪಯೋಗಿಸಿದ. ಹಣವು ಅತಿಯಾಗೇ ಬಂದಿತು, ಅದನ್ನಿತ್ತ ಸೂಳೆ ಒಪ್ಪಲಿಲ್ಲವೆಂದು ಹಿಂತಿರುಗಿ ಬಂದ ಬೊಜ್ಜ. ದೂರು ಅರಸನಲ್ಲಿಗೆ ಹೋಯ್ತು, ಕೊನೆಗೆ ಬೊಮ್ಮಯ್ಯ ಪ್ರಾಣಿಹಿಂಸೆಯನ್ನು ಖಂಡಿಸಿದ.

"ದಯವಿಲ್ಲ ಕುಲಗೇಡಿದಯವಿರಲಿ ಪಶುಗಳಲಿ
ದಯವೇ ಧರ್ಮಯ್ಯ ಜಗದೊಳಗೆ।ಪಾಲಿಸಲು
ಭಯವೆ ಜೀವನಿಗೆ ಭವದೊಳಗೆ" ಎಂದು ಸಾರಿದ.

ಆಸೆಯನ್ನು ಗೆದ್ದಾತ ಶರಣ, ಮಾಯೆಯನ್ನು ಮೀರಿದಾತ ಶರಣ. ಆಸೆಯನ್ನು ಹೊಲೆಯೆಂದು ಭಾವಿಸಿ ಬಾಳುವುದೇ ಶರಣಧರ್ಮ. ಆಕಸ್ಮಿಕವಾಗಿ ಕೇತಯ್ಯನಿಗೆ ಬಿದಿರಿನಲ್ಲಿ ಅಪಾರವಾದ ರತ್ನದ ರಾಶಿಸಿಕ್ಕಿದರೂ ಆತನ ನಿಲುವೇ ಬೇರೆಯಾಗಿತ್ತು.

ಬಂಗಾರ ಹುಳಹತ್ತಿ ಭಂಗವಾಗಿದೆ ಬಿದಿರು
ಕಂಗಳಿಗೆ ಬೇಕ ಹೊಲೆಯಿಂದ। ದಾಸೋಹ
ಸಂಗ ಜೋಡಣೆಗೆ ಕುಂದೆಂದ,॥

**ಕೇತಯ್ಯನ ಕತೆ** :— ಕಾಯದ ಪಂತವೇ ಹೋಯ್ತೆಂದು ಚಿಂತಿಸಿದ. ಇದೇ ಭಾವನೆ ಶರಣನ ಪತ್ನಿಯಲ್ಲೂ ಇತ್ತು. ಲಿಂಗಪತಿ, ಶರಣಸತಿ, ಕಾಯಕ ಶಿವಪೂಜೆ. ಕಾಯಕದಲ್ಲಿ ಪತಿಯ ಕಾಯ ಮಡಿದರೂ ಜಗ್ಗಲಿಲ್ಲ, ಕೇತಯ್ಯನ ಹೆಂಡತಿ ಸಾತವ್ವೆ. ಗಂಡ ಸತ್ತರೆ, ಅಳಲಿಕ್ಕೂ ಅವಕಾಶವೀಯಲಿಲ್ಲ. "ಪತಿಯು ಲಿಂಗಾಗಿದ್ದ ಸತಿಶರಣೆನಾನಿದ್ದೆ. ರತನ ಕಾಯಕವೆ ಶಿವಪೂಜೆ ಇಂದ್ಹೋಗು ಜವನೇಕೆ ಇನ್ನು ಬಾಳುದಕೆ" ಎಂದಳು ಆ ಧೀರೆ.

ಜನ ಸಾಮಾನ್ಯರ ಜೀವನವೇ ಮೂಡಿದಾಗ, ಹಾಡಿ ನಂದನಿ ಬಂದದ್ದು ಜನಪದ ಸಾಹಿತ್ಯ. ಕುಂಬಾರ ಗುಂಡಯ್ಯ, ನೇಗಿಯ ಅಮುಗಯ್ಯ, ಹೂಗಾರ ಮಾದಯ್ಯ, ಇವರೆಲ್ಲ ಕಾಯಕದ ಕೈಲಾಸದಲ್ಲಿದ್ದರು. ಮಡಿವಾಳ ಮಾಚಯ್ಯನಂತೂ ವೀರ. ಇವನದು ವೀರಭಕ್ತಿ

ಮನೆಗೆಲಸ ಮಡಿವಾಳ ದಿನಗೆಲಸ ಶಿವಭಕ್ತಿ
ಮನ ಬೆರೆತ ಲಿಂಗದೇಹದಲ್ಲಿ। ಬಲು ಒಪ್ಪಿ
ಕನಕ ಜನಕಾಗಿ ಬಾಳುವೆಯು॥

**ಮಾಚಯ್ಯ** : ಉಪಯುಕ್ತವಾಗಲೆಂದು ಶ್ರಮಿಸಿದ. ಮಾಚಯ್ಯನ ಕತೆಯನ್ನು ಹೇಳುವ ಜನಪದ ಸಾಹಿತ್ಯ ಆತನನ್ನು ವೀರಭದ್ರನ ಅವತಾರವೆಂದೇ ಕರೆದಿದೆ. ಬಟ್ಟೆ ತೊಳೆಯಲು ಮಡಿಯಾದ ನೀರು ಸಿಕ್ಕದುದ್ದಕ್ಕೆ ಹೆಂಡತಿಯನ್ನೇ ಕೊಂದು ಆಕೆಯ ರಕ್ತದಿಂದಲೇ ಬಟ್ಟೆ ತೊಳೆದನೆಂದು ಪವಾಡವನ್ನು ಹೇಳುತ್ತದೆ.

**ಬೊಮ್ಮಯ್ಯನ ಕತೆ** : ಇಳಿಹಾಳ ಬೊಮ್ಮಯ್ಯನಂತು ಪರತತ್ವದ ಬಳೆಯನ್ನು ಬೆಳೆದುಂಡು ಪರಮಾನಂದವನ್ನು ಅನುಭವಿಸಿದಾತ. ಒಳಗ್ಹೊರಗೊಂದಾದ ಅನುಭವ ಈತನದು. ಹಂಚಿ ಉಂಡಲ್ಲಿ ಹಸಿವಿಲ್ಲವೆಂದು ತಿಳಿದಾತ. ಈತ ಬಿತ್ತುವಾಗಲೇ ದಾಸೋಹದ ಯೋಚನೆಯನ್ನು ಮಾಡುತ್ತಿದ್ದನು.

ಕಡೆಯ ಬಲಕಿನ ತಾಳು ಎಡೆಯಾಯ್ತು ಅರಸನಿಗೆ
ಎಡಗಡೆಯ ತಾಳು ಪಶು-ಪಕ್ಷಿ। ಜೀವನಕೆ
ನಡುವಿನ ತಾಳು ರೈತನಿಗೆ॥

ಬರಗಾಲದಲ್ಲಿ ಬಿತ್ತಲೆಂದು ಬೊಮ್ಮಯ್ಯ ಹೊಲಕ್ಕೆ ಹೋದ, ಶ್ರೀಗಿರಿಗೆಂದು ಹೊರಟ ಅಯ್ಯಗಳು ಬೊಮ್ಮಯ್ಯನಲ್ಲಿಗೆ ಬಂದು ತಮ್ಮ ಉಪವಾಸದ ಕತೆಯನ್ನು ಹೇಳಿದರು. ಬೊಮ್ಮಯ್ಯನ ಅಂತಃಕರಣಕರಗಿತು. ಬಿತ್ತಲೆಂದು ತಂದಿದ್ದ ಕಡಲೆಗಳನ್ನೇ ಹಂಚಿಬಿಟ್ಟ. ಶರಣರ ಸಮಯಕ್ಕಾಗದ ಆ ವಸ್ತು ಇದ್ದರೇನು ಬಿಟ್ಟರೇನು. ಉಳಿದವು ಐದೇ ಬಿಜ. ಅವನ್ನೇ ಬಿತ್ತಿದ. ಅರಸನ ನಿಂದನೆಗೊಳಗಾದ ಆ ಐದೇ ಬೀಜುಗಳು ಮುಂದೆ ಒಳ್ಳೆಯ ಬೆಲೆಯುಳ್ಳ ಬೀಜವಾಗಿ ಬೆಳೆದವು.

ಪಂಚ ಬೀಜಗಳೆಲ್ಲ ಸಂಚರಿಸಿ ಹೋದೊಳಗೆ
ಮಂಚಿಕೆಯ ನಿಲುವು ಬೆಳೆ ಬಂದು ನಗುತಿರಲು
ಸಂಚಿತವು ಪುಣ್ಯ ಬೊಮ್ಮನದು ॥

**ದಾಸೋಹ** : ಇದರಿಂದ ದಾಸೋಹಕ್ಕೆ ಅನುಕೂಲವೂ ಆಯ್ತು. ದಾಸೋಹದ ವಿವರವನ್ನು ಜನಪದ ಕತೆಯಿಂದಲೇ ಕೇಳಬೇಕು.

ಮಾತಿನೊಳು ದಾಸೋಹ ನೀತಿಯೋಳು ದಾಸೋಹ
ಭೂತದಯೆ ನಿತ್ಯ ದಾಸೋಹ। ಬೊಮ್ಮಯ್ಯ
ಮೂತೆರದಿ ಮಾಡಿ ಜಂಗಮಕೆ ॥

ಯಾವುದೂ ಶಾಶ್ವತವಲ್ಲ. ಅತ್ಯಾಸೆಯಿಂದ ಕೂಡಿಟ್ಟು ಮಕ್ಕಳು ಮೊಮ್ಮಕ್ಕಳಿಗೆಂದು ಕೂಡಿಟ್ಟು; ತನ್ಮೂಲಕ ಹಣದ ಮುಗ್ಗಟ್ಟನ್ನು ತಂದು, ಬಡವ ಬಲ್ಲಿದರೆಂಬ ತಾರತಮ್ಯವನ್ನುಂಟುಮಾಡುವ ಖದೀಮರಿಗೆ ಹೇಳಿದಂತಿದೆ ಈ ಮಾತು.

ಮಣ್ಣ ಕಾಯವುಕೇಳೋ ಮಣ್ಣಾಗಿ ಹೋಗುವುದು
ಸಣ್ಣಾಗಿ ಸವಿಸಿ ಜಂಗಮಕೆ ದಾಸೋಹ
ಕಣ್ಣೊಂದೆ ಸಾಕು ಕಾಯಕಕೆ ॥

**ಕಾಯಕ** : ಇದು ಬೊಮ್ಮಯ್ಯನ ನಿಲುವಾಗಿತ್ತು, "ಶರಣರು ನಡೆದದ್ದೆ ಯೋಗ: ನುಡಿದದ್ದೇ ವೇದ". ಯೋಗ ದಂಡವನ್ನು ಹಿಡಿಯ ಬೇಕಾದ ಕೈಗಳು ಗುದ್ದಲಿಯನ್ನು ಹಿಡಿದವು. "ಗುರುವಾದರೂ ಕಾಯಕದಿಂದಲೇ ಮುಕ್ತಿ" ಎಂದು ಸಾರಿದರು. ಶರಣರು ಕಾಯವನ್ನು ದಂಡಿಸಿ, ಕರಣವನ್ನು ಖಂಡಿಸಿ ಕಬ್ಬಿನ ತುದಿಯನ್ನು ಮಾತ್ರ ಮೆಲಿದವರಲ್ಲ, ಕಬ್ಬಿನ ಬುಡವನ್ನೂ ಸವಿದ ಮಹಂತರು.



# ಜಾಗತಿಕ ಭಾಷಣಕಾರರು

## (ಐತಿಹಾಸಿಕ ಕಿರು ಅವಲೋಕನ)

—ಎನ್. ಎಸ್. ಗದಗಕರ

"It is in truth, such a bewitching art that it must find an echo in the heart of every one–R.K. Lagu

ಭಾಷಣ ಕೌಶಲ್ಯ ಇರುವವರೆಲ್ಲ ನಿಜಕ್ಕೂ ಸುದೈವಿಗಳೆಂದೇ ಹೇಳಬೇಕು. ವಾಗ್ಮಿಗಳು ನಮಗೆ ಅಸಂಖ್ಯಾತ ರಂಗಗಳಲ್ಲಿ ದೊರೆಯುವರು. ತತ್ವಜ್ಞಾನಿಗಳು, ಸಮಾಜ ಸುಧಾರಕರು, ರಾಜಕಾರಣಿಗಳು, ಶಾಸಕರು, ಧರ್ಮೋಪದೇಶಕರು ತಮ್ಮ ಮಾತಿನ ಮೇಲ್ಮೆಯಿಂದ ಜನತೆಯ ಕಣ್ಣು ತೆರೆಯಿಸಿರುವರು.

ತರ್ಕಬದ್ಧತೆ, ಅಸಖಲಿತ ವಿಚಾರ ಸರಣಿ, ಭಾಷಾ ಪ್ರೌಢಿಮೆ, ಮಾತಿನ ಚಕಮಕಿ, ತಿಳಿ ವಿನೋದ, ಪ್ರಸಂಗಾವಧಾನತೆ, ಸುಸ್ಪಟತೆ, ಬಹುಶ್ರುತತ್ವ—ಇವೆ ಮೊದಲಾದವು ಒಳ್ಳೆ ಮಾತುಗಾರಿಕೆಯ ಸಾಮಾನ್ಯ ವೈಶಿಷ್ಟ್ಯಗಳೆಂದು ಸಹಜವಾಗಿ ಉದಾಹರಿಸಬಹುದು. ವಾಗ್ಮಿಗಳಾದವರು ಹಲವು ಸಲ ಪೂರ್ವಸಿದ್ಧತೆಯಿಲ್ಲದೆ (Extempore) ಮಾತಾಡಬೇಕಾಗುವುದು, ಅಲ್ಲದೆ ಅಲ್ಲಿ ಸತ್ವನೆಲಸಿರಬೇಕು. ತಮ್ಮ ಮಾತಿನ ಸರಣಿಯನ್ನು ಪ್ರಭಾವಶಾಲಿಯಾಗಿ ಬಿಂಬಿಸುವಷ್ಟು ಕೌಶಲ ಅವರಿಗೆ ಅವಶ್ಯ. ಮಾತುಗಾರರಿಗೆ ಇದೇ ವಿಷಯ ಬೇಕೆಂಬ ಹಟವಿರಕೂಡದು.

ಒಳ್ಳೆಯ ಭಾಷಣಕಾರನ ಮಾತಿನಿಂದ ಮರದಮೇಲಿನ ಮಂಗ ಕೈಬಿಡುವದೆಂಬ ಉಕ್ತಿಯುಂಟು! ಹೀಗೆಂದಾಗ ರಾಷ್ಟ್ರದ ದೈವ ಪರಾವರ್ತನ ಹೊಂದುವದೇನು ಮಹಾ! ಇತಿಹಾಸದ ಪುಟಗಳನ್ನೆ ಈ ದೃಷ್ಟಿಯಿಂದ ತೆರೆದು ನೋಡುವ. ಮೊಗಲ ಸೈನಿಕರು-ಬಾಬರನು ಮುಂದಾಳು ಆಗಿರುವಾಗ—ಒಮ್ಮೆ ರಜಪೂತರೊಡನೆ ಹೋರಾಡಿ ಹೈರಾಣವಾಗಿದ್ದರು. ಆಗ ಬಾಬರನು ಆ ಪರಿಸ್ಥಿತಿಯನ್ನು ಅರಿತು ಅವರಲ್ಲಿ ಚೈತನ್ಯ ಸ್ಫುರಿಸುವಂತೆ ವಾಗ್ ವೈಖರಿ ಹರಿಸಿದನಂತೆ! ತಾನು ಅಂದಿನಿಂದ ಗುಟುಕು ಸರಾಯಿಯನ್ನು ಕುಡಿಯೆನೆಂದು ಶಪಥಗೈದನಂತೆ! ಜನ ಪೆಚ್ಚಾಗಿ ಕುಣಿದಿತು. ದೊರೆಯನ್ನು ಹಿಂಬಾಲಿಸಿತು. ಮೊಗಲ್ ಸಾಮ್ರಾಜ್ಯದ ಅಸ್ತಿವಾರ ಆಗಲೇ ಆಯಿತೆಂದು ಇತಿಹಾಸಕಾರರ ಅಭಿಮತ. ಬಾಬರನು ಸೈನಿಕರ ಕಾರ್ಯವನ್ನು, ರಾಷ್ಟ್ರನಿಷ್ಠೆಯನ್ನು ಅಂದು ಬಡಿದೆಬ್ಬಿಸಿದನಂತೆ! ಇದೇನು ಸಣ್ಣ ಮಾತಲ್ಲ!

### ಕ್ರಾಂತಿಗೆ ಮಾತೇ ಮೂಲ

ಅಡಾಲ್ಫ ಹಿಟ್ಲರನ ಅಭಿಪ್ರಾಯದಂತೆ, "ಜಗತ್ತಿನಲ್ಲಿ ಕ್ರಾಂತಿ ಆದುದು ಬರೆಹದಿಂದ ಕಡಿಮೆ, ಮಾತಿನಿಂದ ಬಹಳ."

ಮಾನವನ ಇತಿಹಾಸದ ಪುಟಗಳಲ್ಲಿ ವಾಗ್ಮಿಗಳ ಪಾತ್ರ ಮಹತ್ತಮ ಎನಿಸಿದೆ. ಸಾರ್ವಜನಿಕ ರಂಗದಲ್ಲಿ, ಆತ್ಮೀಯತೆಯ ಕ್ಷೇತ್ರದಲ್ಲಿ ಭಾಷಣ ಕಲೆಗೆ ಅಪೂರ್ವ ಪ್ರಾಮುಖ್ಯತೆ ಉಂಟಾಗಿದೆ. ಜೀವನದ ಯಾವ ರಂಗದಲ್ಲಿಯೂ ವಾಗ್ಮಿಗಳಿಗೆ ಸ್ಥಾನ ಉಂಟು. ಆದರೇನು? ಹಿಂದಿನಂತೆ ಇಂದಿನ ಮನ್ವಂತರದಲ್ಲಿ ಮಾತುಗಾರಿಕೆಯ ಮಟ್ಟ ಉಳಿದಿಲ್ಲ.

ಭಾರತದ ಇತಿಹಾಸದ ಪೌರಾಣಿಕ ಕಾಲದಲ್ಲಿ ಜನಕ ರಾಜನ ಮಾತಿನ ಕೌಶಲಕ್ಕೆ ನಾವು ದಂಗಾಗುವೆವು. ಶ್ರೀ ಶಂಕರ ಭಗವತ್ಪಾದರು ಮಂಡನಮಿಶ್ರರನ್ನು ಸೋಲಿಸಿ ಉಭಯ ಭಾರತಿಯನ್ನು ನಿರುತ್ತರ ಕುವರಿಯನ್ನಾಗಿಸಿದುದು ಮಹತ್ವದ ಸನ್ನಿವೇಶ. ಅದು ಸಾರ್ವಜನಿಕ ರಂಗವಲ್ಲ ನಿಜ.

### ಕೋಲಾಹಲ

ಇರಲಿ ಪ್ರಾಚೀನ ಪ್ರಪಂಚದ ವಿಖ್ಯಾತ ವಾಗ್ಮಿ



ಗುತ್ತದೆ. ಅತ್ಯಂತ ಪ್ರಮುಖ ದೃಶ್ಯವೆಂದರೆ "The greate red spot" ಎಂಬ ಬಹು ಬಾರಿ ಕೆಂಪನೆಯ ಕ್ಷೇತ್ರ. ಒಂದು ಕಾಲದಲ್ಲಿ ಅದು 25,000 ಮೈಲು ಉದ್ದವಾಗಿಯೂ, 8,000 ಮೈಲು ಅಡ್ಡಲಾಗಿಯೂ ಇತ್ತು. ಆದರೆ ಅದರ ಗಾತ್ರವು ಬದಲಾವಣೆಯಾಗುತ್ತದೆ. ಈ ಕ್ಷೇತ್ರದ ಅಕ್ಷಾಂಶವು ಮೇಲೆ ಮತ್ತು ಕೆಳಗೆ 2 ಅಥವಾ 3 ಡಿಗ್ರಿಗಳಷ್ಟು ಬದಲಾವಣೆಯಾಗುತ್ತದೆ, ಅದರ ರೇಖಾಂಶವು ಕೂಡ ಹಿಂದಕ್ಕೆ ಮುಂದಕ್ಕೆ ಬದಲಾಗುತ್ತದೆ. ಆ "ಸ್ಪಾಟ್" ಗ್ರಹದೊಡನೆ ಸುತ್ತುವುದಿಲ್ಲ; ಆದ್ದರಿಂದ ಅದು ಯಾವ ಮೇಲ್ಮೈಗೂ ಸೇರಿಕೊಂಡಿಲ್ಲವೆಂದು ಊಹಿಸಬಹುದು. ಅದು ಸಾಂದ್ರೀಕೃತವಾದ ಅನಿಲಗಳ ಧೂಮಸ್ತೋಮದಲ್ಲಿ ತೇಲುವ ಘನೀಭೂತವಾದ ಹೀಲಿಯಂ ರಾಶಿಯೆಂದು ಭಾವಿಸಲ್ಪಟ್ಟಿದೆ. ಕೆಂಪು ಬಣ್ಣವನ್ನು ಕೊಡುವ ಲೋಹಗಳೂ ಅದರಲ್ಲಿ ಸೇರಿಕೊಂಡಿರುವುದರಿಂದ, 'ಸ್ಪಾಟ್"ಗೆ ಕೆಂಪು ಬಣ್ಣವಿದೆ. "ಸ್ಪಾಟ್" ಯಾವಾಗಲೂ ಒಂದೇ ಮಟ್ಟದಲ್ಲಿ ತೇಲುವುದಿಲ್ಲ. ಗ್ರಹದ ಇತರ ಭಾಗಗಳು ಅದನ್ನು ಆಕರ್ಷಿಸಿದಾಗ ಅದರ ಅಂಚುಗಳನ್ನು ಅಮೋನಿಯದ ಮೋಡಗಳು ಮುಚ್ಚುತ್ತವೆ. ಕೆಂಪುಸ್ಪಾಟಿನ ಗಾತ್ರವು ಬದಲಾಗುತ್ತಿರುವುದಕ್ಕೆ ಇದೇ ಕಾರಣ.

ಪಟ್ಟಿಗಳಲ್ಲಿ ಇತರ ಬಗೆಯ ಅನೇಕ "ಸ್ಪಾಟ್"ಗಳೂ ಕಂಡುಬರುತ್ತವೆ. ಈ ಪಟ್ಟಿಗಳೆಲ್ಲಾ ಒಂದೇ ಸಮನಾದ ಅವಧಿಯಲ್ಲಿ ತಿರುಗುವುದಿಲ್ಲ. ಬೃಹಸ್ಪತಿ ಗ್ರಹದ ಸಮಭಾಜಕವೃತ್ತದಲ್ಲಿ ಒಂದು "ದಿನ"ವು, ಧ್ರುವಗಳ ದಿನಕ್ಕಿಂತಲೂ ಕಡಿಮೆ ಸಮಭಾಜಕವೃತ್ತದಲ್ಲಿ ಒಂದು "ದಿನ"ದ ಅವಧಿ 9 ಗಂಟೆ 50 ನಿಮಿಷ; ಧ್ರುವಗಳಲ್ಲಿ 9ಗಂಟೆ 55 ನಿಮಿಷ, ಜೂಪಿಟರ್ ಗ್ರಹದಲ್ಲಿ ಕಣ್ಣಿಗೆ ಕಾಣಿಸುವ ಭಾಗವು ದ್ರವವೆಂಬುದನ್ನು ಇದು ಖರೆಪಡಿಸುತ್ತದೆ. ಈ ವೇಗದ ಚಲನೆಯ ಪರಿಣಾಮವಾಗಿ ವಾತಾವರಣವು ಸಮಭಾಜಕವೃತ್ತದಲ್ಲಿ ಉಬ್ಬುತ್ತದೆ. ಗ್ರಹವು ಧ್ರುವಗಳಲ್ಲಿ ಚಪ್ಪಟೆಯಾಗಿರುವಂತೆ ಕಾಣುತ್ತದೆ.

ಬೃಹಸ್ಪತಿ ಗ್ರಹವು ಬಹು ಪ್ರಬಲವಾದ ರೇಡಿಯೋ ತರಂಗಗಳನ್ನು ಒಂದು ಸೆಕೆಂಡಿಗೆ 2.2 ಕೋಟಿ ಆವರ್ತಿಯಲ್ಲಿ ಹೊರಡಿಸುತ್ತದೆ. ಇದು ಸೆಕೆಂಡಿಗೆ 4½ ಕೋಟಿ ಆವರ್ತಿಗಳನ್ನು ಹೊರಡಿಸುವ ಟೆಲಿವಿಷನ್ ತರಂಗಗಳಿಗಿಂತಲೂ ಕಡಿಮೆ, ಅಂತರಿಕ್ಷದಲ್ಲಿ ಇತರ ಅನೇಕ ಕಾಯಗಳೂ ಇದೇ ಆವರ್ತಿಯಲ್ಲಿ ರೇಡಿಯೋ ತರಂಗಗಳನ್ನು ಉತ್ಪತ್ತಿ ಮಾಡುತ್ತವೆ. ಆದರೆ ಬೃಹಸ್ಪತಿ ಗ್ರಹದ ರೇಡಿಯೋ ಅಲೆಗಳನ್ನು ವಿಶಿಷ್ಟ ಸಂಕೇತಗಳಿಂದ ಗುರುತಿಸಬಹುದು ಅದರ ರೇಡಿಯೋ ತರಂಗಗಳನ್ನು ರೇಡಿಯೋ ರಿಸೀವರ್‌ನಿಂದ ಹೆಚ್ಚಿಸಿ ಕರ್ಣಗೋಚರ ಶಬ್ದಗಳನ್ನಾಗಿ ಮಾಡಿದಾಗ, ಆ ಶಬ್ದಗಳು ಸಮುದ್ರವು ಕರಾವಳಿಯಲ್ಲಿ ಮಾಡುವ ಶಬ್ದದಂತೆ ಕೇಳಿಸುತ್ತವೆ. ಈ ರಹಸ್ಯವಾದ ರೇಡಿಯೋ ತರಂಗಗಳು ಹೇಗೆ ಉತ್ಪತ್ತಿಯಾಗುತ್ತವೆ ಎಂಬುದು ಯಾರಿಗೂ ನಿಖರವಾಗಿ ಗೊತ್ತಿಲ್ಲ. ಈ ಗ್ರಹದ ಅಂತರ್ಭಾಗವು ದ್ರವರೂಪದಲ್ಲಿದೆಯೆಂಬುದಕ್ಕೆ ಇದು ತಾರ್ಕಣೆ.

ವಿದ್ಯುತ್‌ನಿಂದ ಕೂಡಿದ ಕಣಗಳ ಪ್ರವಾಹವು ಗ್ರಹದೊಳಗೆ ಹರಿಯುತ್ತಿರುವುದರಿಂದ ಲೋಹ ಚುಂಬಕ ಕ್ಷೇತ್ರಗಳು (Magnetic Fields) ಉಂಟಾಗತ್ತವೆ. ಗ್ರಹದ ತಿರುಗಣೆಯು ಬಹಳ ತೊಡಕಾಗಿದೆ; ಪ್ರತಿಯೊಂದು ಪಟ್ಟಿಯು ಭಿನ್ನ ಭಿನ್ನ ವೇಗದಲ್ಲಿ ತಿರುಗುತ್ತದೆ. ಮ್ಯಾಗ್ನೆಟಿಕ್ ಕ್ಷೇತ್ರಗಳು ಬಗೆ ಬಗೆ ರೀತಿಗಳಲ್ಲಿ ಬದಲಾಗುತ್ತಿರುವಾಗ ರೇಡಿಯೋ ತರಂಗಗಳು ಉತ್ಪತ್ತಿಯಾಗುತ್ತವೆ. ಈ ಉತ್ಪತ್ತಿಯ ಬಗ್ಗೆ ಇನ್ನೂ ಬೇರೆ ಬೇರೆ ತತ್ವಗಳಿವೆ. ಆದರೆ ಅವುಗಳನ್ನು ಖರೆಪಡಿಸಲು ಸಾಕಷ್ಟು ಪ್ರಮಾಣಗಳಿಲ್ಲ.

ಪೃಥ್ವಿಗೆ ಒಂದೇ ಒಂದು ಉಪಗ್ರಹವಿದೆ—ಚಂದ್ರ. ಆಶ್ಚರ್ಯಕಾರಿ ಸಂಗತಿಯೆಂದರೆ ಜೂಪಿಟರ್‌ಗೆ 11 ಉಪಗ್ರಹಗಳಿವೆ. ಎಂದರೆ 11 ಚಂದ್ರರು ಅದರ ಸುತ್ತಲೂ ಸುತ್ತುತ್ತಿರುತ್ತವೆ. —

---

ಗಮನಿಸಿರಿ !

ಇದೇ ಪುಟಕ್ಕೆ ಹಾಕಬೇಕಾಗಿದ್ದ "ಜಾಗತಿಕ ಭಾಷಣಕಾರರು" ಲೇಖನದ ಮುಂದುವರಿದ ಭಾಗವನ್ನು 25 ನೇ ಪುಟಕ್ಕೆ ಹಾಕಿದೆ.

---

ಸಣ್ಣ ಕಥೆ

# ಸಂಶಯ

— ಪ. ರಾಮಕೃಷ್ಣ ಶಾಸ್ತ್ರಿ.

ದೇವಸ್ಥಾನದ ಗರ್ಭಗುಡಿಯ ಮೆಟ್ಟಲಿನಲ್ಲಿ ತಾನು ತಂದ ಹಣ್ಣುಕಾಯಿ ತಟ್ಟೆಯನ್ನಿಟ್ಟು ಗೋದಮ್ಮ ಒಮ್ಮೆ ದೇವರಿಗೆ ಬಾಗಿ ವಂದಿಸಿದಳು. ಅವಳು ಕಣ್ದೆರೆದು ದೇವರ ಮೂರ್ತಿಯನ್ನು ನೋಡುತ್ತ ಮನದ ಬಯಕೆಯನ್ನು ಮೌನವಾಗಿ ನಿವೇದಿಸಿಕೊಂಡಳು ಆ ನಿವೇದನೆ ದೇವರ ಕೇಳಿಸಿತೋ ಎಂಬ ಹಾಗೆ ಬಿಳಿಯ ಪುಷ್ಪವೊಂದು ದೇವರಿಗೆ ಮಕುಟದಿಂದ ಉರುಳುರುಳಿ ಕೆಳಗೆ ಬಿತ್ತು. ಅದನ್ನು ಕಂಡಾಗ ಗೋದಮ್ಮನಿಗಾದ ಸಂತಸ ಅಷ್ಟಿಷ್ಟಲ್ಲ. ಆಕೆ ಪುನಃ ಪುನಃ ಬಾಗಿ ವಂದಿಸಿದಳು. ಗಲ್ಲ ತಟ್ಟಿಕೊಂಡಳು. ಭಕ್ತಿ ಭಾವದಿಂದ ಅರ್ಚಕರ ಕೈಯಿಂದ ಪ್ರಸಾದ ಪಡೆದುಕೊಂಡು ಹಣ್ಣುಕಾಯಿ ತಟ್ಟೆಯನ್ನು ಹಿಡಿದು-ಕೊಂಡು ದೇವಸ್ಥಾನಕ್ಕೆ ಪ್ರದಕ್ಷಿಣೆ ಬಂದು ಮನೆಯ ದಾರಿ ಹಿಡಿದಳು,

ದಾರಿಯಲ್ಲಿ ಗೋದಮ್ಮನಿಗೆ ಪಾತಮ್ಮ, ಪದ್ದಕ್ಕ ಎದುರಾದರು. ಅವರ ಕೈಯಲ್ಲೂ ಹಣ್ಣುಕಾಯಿ ತಟ್ಟೆಯಿತ್ತು. ಅವರು ದೇವಸ್ಥಾನಕ್ಕೆ ಹೋಗುತಿದ್ದರು. ಗೋದಮ್ಮನನ್ನು ಕಂಡು ಪಾತಮ್ಮ, “ ದೇವಸ್ಥಾನಕ್ಕೆ ಹೋದುದೇ ?” ಎಂದು ಪ್ರಶ್ನಿಸಿದಳು. ಗೋದಮ್ಮ ‘ಹೌದು ’ ಎಂಬಂತೆ ಮುಗ್ನುಳಗೆ ಬೀರಿ ತಲೆಯಾಡಿಸಿದಳು.

“ ಯಾರೇ ನಿನ್ನ ಮನೆಗೆ ಬಂದ ಹುಡುಗ ? ನಿಮ್ಮ ಮನೆ ದಾರಿ ಕೇಳುತ್ತ ನಮ್ಮ ಮನೆಗೂ ಬಂದ. ಬಹಳ ಚಂದದ ಹುಡುಗ–ಅಲ್ಲವೆ ? ” ಎಂದು ಪದಕ್ಕ ಕಣ್ಣು ಮಿಟುಕಿಸಿ. ತನ್ನ ಪಟ್ಟೆ ಸೀರೆಯ ಸೆರಗಿನ ಮೇಲೆ ಕೈ ಹಾಕಿ ಸೊಂಟಕ್ಕೆ ಬಲವಾಗಿ ಬಿಗಿದುಕೊಂಡಳು,

“ ಓ ಅವನೇ ! ಯಾರೆಂದು ನನಗೂ ಗೊತ್ತಿಲ್ಲ. ನಮ್ಮವರನ್ನು ಕಾಣಬೇಕಂತೆ. ಅವರು ಮನೆಯಲ್ಲಿಲ್ಲ; ಬರುವಾಗ ಎರಡು ದಿವಸವಾದೀತು ಎಂದರೂ ಮನೆ-ಯಲ್ಲೇ ತಂಗಿದ್ದಾನೆ ” ಎಂದಳು ಗೋದಮ್ಮ ಅದೊಂದು ವಿಶೇಷ ಸುದ್ದಿಯಲ್ಲವೆಂಬಂತೆ.

“ ಈಗಿನ ಕಾಲದಲ್ಲಿ ಗುರುತಿಲ್ಲದವರನ್ನು ಮನೆ-ಯೊಳಗೆ ನಿಲ್ಲಿಸಿಕೊಳ್ಳುವುದು ಅಪಾಯ ಗೋದಮ್ಮ ಯಾರೋ ಏನೋ. ಅದರಲ್ಲೂ ನಿನ್ನ ಯಜಮಾನರಿಲ್ಲ. ಅಂಥವರನ್ನು ರಾತ್ರಿ ಹೊತ್ತು ಮನೆಯೊಳಗಿಟ್ಟು-ಕೊಂಡರೆ ಹೇಗಾದೀತು ಎಂದು ಹೇಳುವುದೇ ಕಷ್ಟ. ಪದ್ಮನಾಭ ಶಾಸ್ತ್ರಿಗಳ ಮನೆಯಲ್ಲಾದುದು ಮರೆತೆಯೇನು ? ” ಎಂದು ಪದ್ದಕ್ಕ ಗಂಭೀರವಾಗಿ ಹೇಳಿದಳು.

ಪದ್ದಕ್ಕನ ಮಾತು ಕೇಳಿ ಗೋದಮ್ಮ ಒಮ್ಮೆ ನಡುಗಿದಳು ಶಾಸ್ತ್ರಿಗಳಲ್ಲಿ ಒಬ್ಬ ತರುಣ ಬಂದಿದ್ದ. ರಾತ್ರಿಯಿಡೀ ಏನೇನೋ ಹರಟೆ ಕೊಚ್ಚುತ್ತ ನಗುತ್ತಿದ್ದ ನಗಿಸುತ್ತಿದ್ದ. ಬೆಳಗಾದಾಗ ಆ ತರುಣ ಮಾಯವಾಗಿದ್ದ. ಶಾಸ್ತ್ರಿಗಳ ದೇವರ ಕೊರಳಿನ ನಾಲ್ಕೆಳೆಯ ಚಕ್ರಸರವೂ ಅವನೊಂದಿಗೇ ಮಾಯವಾಗಿತ್ತು. ಆ ನೆನಪು ಬಂದೊಡನೆಯೇ ಗೋದಮ್ಮನಿಗೆ ತನ್ನ ತಂದೆ ಮನೆಯಲ್ಲಿ ಕೊಟ್ಟ ಆಭರಣಗಳ ನೆನಪಾಯಿತು. ಅದು ಜಗಲಿಯಲ್ಲಿ ಹಲಗೆಯೊಂದರ ಮೇಲೆ ಕರಡಿಗೆಯಲ್ಲಿತ್ತು ಅದನ್ನು ಬಂದವ ಎಲ್ಲಾದರೂ ಹಾರಿಸಿಕೊಂಡು ಹೋಗುತ್ತಾನೋ ಎಂಬ ಭೀತಿಯೂ ಉಂಟಾಯಿತು. ಆಕೆ ಅವಸರವಸರದಲ್ಲಿ ನುಡಿದಳು, “ತುಂಬಾ ಹೆಡ್ಡಾಯಿತು. ಪದ್ದಕ್ಕ ನನಗೆ ಹಾಗೆಲ್ಲ ತಲೆಯೇ ಹೋಗಲಿಲ್ಲ, ನಿನಗಾದರೆ ಎಷ್ಟು ಎಚ್ಚರವಿದೆ! ಥೂ, ನನ್ನ ಮರೆವಿಗೆ ಮಣ್ಣು ಹಾಕ.”

ಪದ್ದಕ್ಕ ಹೆಮ್ಮೆಯಿಂದ ನಕ್ಕಳು. “ನನಗೆ ಅವನನ್ನು ನೋಡುವಾಗಲೇ ಶಕ್ಕ ಎಂದು ತೋರಿತ್ತು. ಅದರಿಂದಾಗಿ ನಿನ್ನನ್ನು ಎಚ್ಚರಿಸಿದೆ ಅಷ್ಟೆ. ಶಾಸ್ತ್ರಿಗಳಲ್ಲಿಗೆ ಬಂದವನೂ ಹೀಗೇ ಇದ್ದ. ಸುಂದರರಾಯರಲ್ಲಿಗೆ ಬಂದವನೂ ಹೀಗೇ ಇದ್ದ. ಈ ಖದೀಮರು ಎಂಥ ವೇಷ ಹಾಕಲೂ ತಯಾರು ಗೋದಮ್ಮ” ಎಂದಳು ಪದ್ದಕ್ಕ.



ಸುಂದರರಾಯರ ಹೆಸರು ಕೇಳಿ ಇನ್ನೂ ಬೆಚ್ಚಿದಳು ಗೋದಮ್ಮ. ಅಲ್ಲಿಗೆ ಬಂದ ಖದೀಮ ಅವರ ಮಗಳನ್ನೇ ಹಾರಿಸಿಕೊಂಡು ಹೋಗಿದ್ದ. “ಮಗಳನ್ನು ಮನೆಯಲ್ಲಿ ಒಂಟಿಯಾಗಿ ಬಿಟ್ಟು ಬಂದಿದ್ದೇನೆ ಪದ್ದಕ್ಕ. ನನ್ನಂಥ ಮೊದ್ದುಗಳು ಇನ್ನು ಯಾರೂ ಇಲ್ಲ. ಬರುತ್ತೇನೆ ಪದ್ದಕ್ಕ, ಬರುತ್ತೇನೆ ಪಾತಕ್ಕ, ಎನ್ನುತ್ತ ಗೋದಮ್ಮ ಮನೆಯ ಕಡೆ ಬಿರಬಿರನೆ ನಡೆಯುತೊಡಗಿದಳು. ಅವಳ ತಲೆಯ ಒಳಗೆ ನೂರೆಂಟು ಭೀತಿಯ ಕಲ್ಪನೆಗಳು ತುಂಬಿ ಅವಳ ಮೈ ಮುಖವೆಲ್ಲ ಬೆವರಿನಿಂದ ಒದ್ದೆಯಾಯಿತು. ಯಾವಾಗ ಮನೆ ಸೇರಿಯೇನು ಎಂಬ ಲವಲವಿಕೆ ಆಕೆಯಲ್ಲುಂಟಾಗಿತ್ತು.

ಬಂದವ ಕಳ್ಳನಾಗಿದ್ದರೆ ತನ್ನ ಚಿನ್ನದ ಕರಡಿಗೆಯನ್ನು ಅವನು ಖಂಡಿತ ಹಾರಿಸುತ್ತಾನೆ. ಯಾಕಪ್ಪ ನಾನಲ್ಲಿಟ್ಟೆ ? ಅದನ್ನು ಇನ್ನು ಹೊರಗೆ ಇಡಲೇಬಾರದು ಎಲ್ಲಾದರೂ ಕೋಣೆಯೊಳಗಿಡಬೇಕು. ಎಲ್ಲಾದರೂ ಅವನೀಗ ಅದನ್ನು ಹಾರಿಸಿದ್ದರೆ ತಾನೇನು ಮಾಡಬೇಕೆಂದು ಆಕೆಗೆ ತಿಳಿಯಲಿಲ್ಲ. ಅದಕ್ಕಿಂತಲೂ ಹೆಚ್ಚಿನ ಹೆದರಿಕೆ ಅವಳ ಬೆಳೆದ ಮಗಳದು. ಪರಕೀಯನೊಬ್ಬ ಮನೆಯೆಲ್ಲಿದ್ದಾಗ ಇನ್ನೂ ಮದುವೆಯಾಗದ ಹುಡುಗಿಯನ್ನು ಒಂಟಿಯಾಗಿ ಬಿಟ್ಟು ಬಂದುದು ಎಂದರೆ ತನ್ನ ಹೆಡ್ಡುತನಕ್ಕೆ ಏನು ಹೇಳಬೇಡ ಎಂದು ಪ್ರಶ್ನಿಸಿಕೊಂಡಳು. ತಾನಿಲ್ಲದ ಸಮಯ ಸಾಧಿಸಿ ಈಗ ಏನಾದರೂ ಆಗಿ ಹೋಗಿದ್ದರೆ ತನ್ನ ಗತಿಯೇನು ಎಂಬುದೇ ಆಕೆಗೆ ತಿಳಿಯಲಿಲ್ಲ.

ಮಗಳನ್ನು ಆದಷ್ಟು ಬೇಗ ಮದುವೆ ಮಾಡಿ ಕೊಡಬೇಕೆಂದು ಗೋದಮ್ಮ ಇಷ್ಟಪಟ್ಟಿದ್ದಳು. ತನ್ನ ಗಂಡನೊಡನೆ ಈ ಕುರಿತು ಆಗಾಗ ಒತ್ತಾಯಿಸುತ್ತಲೂ ಇದ್ದಳು ಆಕೆಯ ಒತ್ತಾಯಕ್ಕೆಂಬಂತೆ ಅವನು ಪ್ರಯತ್ನಿಸಿಯೂ ಇದ್ದ. ನಾಲ್ಕಾರು ಸಂಬಂಧಗಳು ಬಂದೂ ಇದ್ದುವು. ಅವೆಲ್ಲ ಬಂದ ಹಾಗೆಯೇ ಹೋಗಿದ್ದುವು. ಇದರಿಂದ ನಿರಾಶೆಗೊಂಡ ಅವಳ ಗಂಡ “ಇನ್ನು ಕಾಲ ಬಂದಾಗ ಮಗಳಿಗೆ ಮದುವೆಯಾದೀತು” ಎಂದು ಕೈ ಕೊಡವಿ ಸುಮ್ಮನಾಗಿದ್ದ. ಆದರೆ ಗೋದಮ್ಮನ ಒತ್ತಾಯ ನಡೆಯುತ್ತಲೇ ಇತ್ತು. ಬೆಳೆದ ಮಗಳನ್ನು ಮನೆಯಲ್ಲಿಟ್ಟುಕೊಳ್ಳುವುದು ಮರ್ಯಾದೆಗೂ ಭೂಷಣವಲ್ಲ; ಅದೊಂದು ಧೈರ್ಯವೂ ಅಲ್ಲವೆಂದು ಅವಳ ನಂಬುಗೆ. ಆದರಿಂದಾಗಿ ಆಕೆಗೆ ಗಂಡನ ಔದಾಸೀನ್ಯ ಕಂಡು ಅವನೊಡನೆ ಮನಸ್ಸಿನೊಳಗೇ ಸಿಟ್ಟೂ ಬಂತು.

ನಾಯೊಂದು ಬಗುಳಿದಾಗ ತನ್ನ ಮನೆ ಬಂತು ಎಂದು ಗೋದಮ್ಮನಿಗೆ ತಿಳಿಯಿತು. ಆಶೆ ಮುಖದ ಬೆವರು ಸೀಂಟಿ ಕೈ ಕೊಡವಿ ಏದುಸಿರು ಉಸ್ಸೆನ್ನುತ್ತ ಅಂಗಳದಿಂದ ಒಳ ಜಗಲಿಯನ್ನು ಹೊಕ್ಕು ಕಳ್ಳರಂತೆ ಸುತ್ತೂ ನೋಡಿದಳು.

ಮಗಳು ಅಲ್ಲೆಲ್ಲೂ ಇರಲಿಲ್ಲ. ಅವನು ಹೊಟ್ಟೆ ಮೇಲಾಗಿ ಮಲಗಿಕೊಂಡು ಪುಸ್ತಕವನ್ನು ಓದುತ್ತಿದ್ದ. ಗೋದಮ್ಮನನ್ನು ಕಂಡು ಕಿರು ನಗೆ ಬೀರಿ, “ದೇವಸ್ಥಾನಕ್ಕೆ ಹೋಗಿ ಬಂದಿರಾ ? ಪ್ರಸಾದ ಇತ್ತ ಕೊಡಿ” ಎಂದು ವಿನಯದಿಂದ ಕೈ ನೀಡಿದ.

‘ಈ ಠಕ್ಕನಿಗೂ ಪ್ರಸಾದ ಬೇಕಿನ್ನು’ ಎಂದು ಮನದೊಳಗೆ ಹೇಳಿಕೊಳ್ಳುತ್ತ ದೃಷ್ಟಿಯನ್ನು ಹಲಗೆಯತ್ತ ಹೊರಳಿಸಿದಳು, ಕರಡಿಗೆ ಅವಳು ಇಟ್ಟಂತೆ ಅಲ್ಲಿಯೇ ಇತ್ತು. ಸಮಾಧಾನದ ನಿಟ್ಟುಸಿರೆಳೆದು ಅವನಿಗೆ ಪ್ರಸಾದ ಕೊಟ್ಟು ಒಳಗೆ ಹೋದಳು,

ಹಿತ್ತಿಲ ಬಾಗಿಲಲ್ಲಿ ಮಗಳು ಏನನ್ನೊ ತೊಳೆಯುತ್ತಿದ್ದಳು. ಹಣ್ಣುಕಾಯಿ ತಟ್ಟೆಯನ್ನು ಒಳಗಿಟ್ಟು “ತಾನು ಹೋದ ಮೇಲೆ ಅವನೇನು ಮಾಡುತ್ತಿದ್ದ ? ” ಎಂದು ಮಗಳೊಡನೆ ಮೆಲುಧ್ವನಿಯಲ್ಲಿ ಕೇಳಿದಳು ಗೋದಮ್ಮ.

ಮಗಳು ತಲೆಯೆತ್ತಿ ತಾಯ ಮೊಗವನ್ನು ನೋಡಿದಳು. ಮಗಳ ಮುಖದ ಮೇಲೆ ನೆರಿಗೆಗಳು ಬಿದ್ದವು. “ಊಹುಂ, ಏನೂ ಮಾಡಲಿಲ್ಲ. ಓದಿಕೊಂಡೇ ಇದ್ದರು. ನಾನು ಹೊರಗೊಮ್ಮೆ ಹೋದಾಗ ‘ನೀನು ಶಾಲೆಗೆ ಹೋಗಿದ್ದೆಯಾ ? ಎಷ್ಟನೇ ಕ್ಲಾಸು ? ಸಂಗೀತ ಬರುತ್ತದೆಯೆ ? ಎಂದೆಲ್ಲ ಕೇಳಿದರು. ನಾನು ನಾಚಿ ಒಳಗೆ

ಬಂದೆ" ಎಂದಳು ಮಗಳು.

"ಓಹೋ. ಭಾರೀ ಸಾಹಸದ ಕೆಲಸ ಮಾಡಿದಿ ಅಲ್ಲವೇ ? ಯಾರಾದರೂ ಬಂದಿರುವಾಗ ನಿನಗೆ ಹೊರಗೆ ಕೆಲಸವಾದರೂ ಏನು ? ಅಲ್ಲಿ ಹ್ಹಿಹ್ಹಿಹ್ಹಿ ಎಂದು ಕುಣಿವುದಾದರೂ ಏಕೆ " ಎಂದು ಸಿಟ್ಟಿನಿಂದ ಮಗಳ ಕಡೆ ನೋಡಿದಳು ಗೋದಮ್ಮ.

ತಾಯಿಯ ಅಕಾರಣ ಸಿಟ್ಟು ಮಗಳಿಗೆ ಅರ್ಥವಾಗಲಿಲ್ಲ. ಆಕೆ ಮೃದುವಾಗಿ ಕೇಳಿದಳು, "ಯಾರಮ್ಮ, ಹೊರಗೆ ಕುಣೀತಾ ಹೋದುದು ? ನಿನಗೆ ಹುಚ್ಚು.

"ಸಾಕು ಬಾಯ್ಮುಚ್ಚು. ನಿನ್ನ ವ್ಯೆಯಾರ ನನಗೆ ಗೊತ್ತಿದೆ" ಎಂದು ಮರ್ದಾನ ಪಡೆದವಳಂತೆ ಗೋದಮ್ಮ ಅಡಿಗೆ ಕೋಣೆಗೆ ಹೊದಳು.

ಪದ್ದಕ್ಕ ಒಂದೆರಡು ಕೆಟ್ಟ ಸುದ್ದಿಗಳನ್ನು ಹೇಳಿದ ಆನಂತರ ಗೊದಮ್ಮನ ಚಿತ್ತ ಕ್ಷೋಭೆಗೊಳಗಾಗಿತ್ತು. ಆಕೆಗೆ ಏನು ಮಾಡಬೇಕು, ಏನು ಬಿಡಬೇಕು ಎಂದು ತೋರುತ್ತಿರಲಿಲ್ಲ ಹೊರಗೊಬ್ಬ ಕಳ್ಳ ಕನ್ನ ಕೊರೆಯಲು ಯತ್ನಿಸಿದಾಗ ತನ್ನ ಮನೆಯನ್ನು ಯಾವ ರೀತಿ ಕಾಪಾಡಿಕೊಳ್ಳಬೇಕೆಂಬ ಉಪಾಯ ಆಕೆಗೆ ಹೊಳೆಯಲಿಲ್ಲ. ಗಂಡನೊಡನೆ ಆಕೆಗೆ ಎಲ್ಲಿಲ್ಲದ ಸಿಟ್ಟು ಬಂತು. ಮನೆಯಿಂದ ಹೊರಟು ನಾಲ್ಕು ದಿವಸವಾಯ್ತು. ಇನ್ನೂ ಮನೆಗೆ ಹಾಜರಿ ಕೊಟ್ಟಿರಲಿಲ್ಲ. ಎಲ್ಲಾದರೂ ನೆಂಟರ ಮನೆ ಸೇರಿ ಅಲ್ಲಿ ಇಸ್ಪೀಟಾಡುತ್ತ ಕುಳಿತರೆ ಇಲ್ಲಿ ಮನೆ ಗಾಳಿಗೆ ಹಾರಿ ಹೋದರೂ ತಿಳಿಯದ ಪುಣ್ಯಾತ್ಮ ಅವರೂ'ಥೂ,ಎಂಥ ಬೇಜವಾಬ್ದಾರಿ' ಎಂದು ಕೊಂಡಳು ಗೋದಮ್ಮ.

ಕತ್ತಲಾಗುತ್ತ ಬಂದಂತೆ ಗೋದಮ್ಮನ ಭೀತಿಯ ಭೂತ ಹೆಡೆಯೆತ್ತಿನರ್ತಿಸ ತೊಡಗಿತು. ಅವಳೊಮ್ಮೆ ಹೊರಗೆ ಇಣಿಕಿ ನೋಡಿದಳು. ಅವನು ಚಾಪೆಯ ಮೇಲೆ ಕುಳಿತು ಅತ್ತಿತ್ತ ನೋಡುತ್ತಿದ್ದ. ಅವಳ ತಾಮ್ರದ ಕರಡಿಗೆ ಎಡೆಗೂ ಅವನ ದೃಷ್ಟಿ ಹರಿದಿರಬಹುದು. ಅದನ್ನಲ್ಲಿಂದ ತೆಗೆದು ಬೇರೆಲ್ಲಾದರೂ ಇಡಬೇಕು. ಅದು ಅಭರಣದ ಕರಡಿಗೆ ಎಂದು ಅವನಿಗೆ ಗೊತ್ತಾಗಲೇ ಬಾರದು. ಗೊತ್ತಾದರೆ ರಾತ್ರಿ ನಮ್ಮಿಬ್ಬರ ಕೊರಳು ಹಿಚುಕಿ ಅದನ್ನು ಹೊತ್ತುಕೊಂಡು ಹೋದರೆ ಇಲ್ಲಿ ಕೇಳುವವರಾದರೂ ಇದ್ದಾರೆಯೇ ?

ಆಕೆ ಹೊರಗೆ ಬಂದು ದೀಪ ಹಚ್ಚಿದಳು. ಮೆಲ್ಲನೆ ಹಲಗೆ ಹತ್ತಿರ ಹೋಗಿ ಆ ಕರಡಿಗೆಯನ್ನು ತೆಗೆಯಲು ಯತ್ನಿಸಿದಳು. ಆದರೆ ಅದು ಅವಳಿಗೆ ಎಟಕುತ್ತಿರಲಿಲ್ಲ. ತುದಿಗಾಲಲ್ಲಿ ನಿಂತರೂ ಇನ್ನೂ ತುಸು ಎತ್ತರದಲ್ಲಿತ್ತು ಆ ಕರಡಿಗೆ.

"ಏನಮ್ಮ ನಾನು ತೆಗೆದು ಕೊಡಲೇ "? ಅವನು ಕುಳಿತಲ್ಲಿಂದಲೇ ಪ್ರಶ್ನಿಸಿದ.

"ಊಂ ಬೇಡ ಬೇಡ" ಎನ್ನುತ್ತ ಗೋದಮ್ಮ ಕರಡಿಗೆಯನ್ನು ಹಾರಿ ಎಳೆದಳು ಅದು ಅವಳ ಕೈಯಿಂದ ತಪ್ಪಿ ಝಣತ್ಕರಿಸುತ್ತ ಮುಚ್ಚಳ ತೆರೆದುಕೊಂಡೇ ಕೆಳಗೆ ಬಿತ್ತು. ಅದರೊಳಗಿದ್ದ ಆಭರಣಗಳು ನೆಲಕ್ಕೆ ಬಿದ್ದು ದೀಪದ ಬೆಳಕಿಗೆ ಹೊಳೆದುವು.

'ಕೆಲಸ ಕೆಟ್ಟಿತು. ಎಲ್ಲವೂ ಆ ಕಳ್ಳನಿಗೆ ಗೊತ್ತಾಯಿತು' ಎಂದುಕೊಂಡು ಗೋದಮ್ಮ ಆ ಆಭರಣಗಳನ್ನು ಹೆಕ್ಕತೊಡಗಿದಳು.

"ನಾನು ತೆಗೆದುಕೊಡುತ್ತಿದ್ದೆ. ಈಗೆಲ್ಲಾ ಚೆಲ್ಲಾಪಿಲ್ಲಿಯಾಯಿತಲ್ಲ" ಎನ್ನುತ್ತ ಅವನೂ ಆಭರಣವನ್ನು ಹೆಕ್ಕಿ ಅವಳ ಕೈಗೆ ಕೊಡತೊಡಗಿದಳು.

ಗೋದಮ್ಮ ಬೇಗಬೇಗನೆ ಕರಡಿಗೆಗೆ ತುಂಬಿಸುತ್ತ ನಡುಗುವ ಶರೀರವನ್ನು ಅವನಿಗೆ ತೋರ್ಪಡಿಸಲು ಮನಸ್ಸಿಲ್ಲದೆ ಭೀತಿ ತುಂಬಿದ ನೇತ್ರದಿಂದ ಅವನನ್ನು ನೋಡಿದಳು, ಅವನ ನೀಲಿ ಕಣ್ಣುಗಳು ಪಳಪಳ ಹೊಳೆಯುತ್ತಿದ್ದುವು. ತುಟಿಯಲ್ಲಿ ಮಂದಸ್ಮಿತ ನಗೆಯೊಂದು ಬೆಳಗುತ್ತಿತ್ತು. 'ಕಳ್ಳರ ಮುಖವೇ ಹಾಗೆ. ಶುದ್ಧ ದಗಲಬಾಜಿ ಮನುಷ್ಯನಾಗಿರಬೇಕು ಇವನು' ಎಂದುಕೊಂಡು ಅಲ್ಲಿದ ಮೆಲ್ಲನೆ ಸರಿಯುತ್ತ ನಡೆದಳು.

ರಾತ್ರಿ ಊಟವಾಗಿ ಮಲಗಿದ ಮೇಲೆ ಗೋದಮ್ಮ ದೀಪ ಹಿಡಿದು ಕಿಟಕಿ ಬಾಗಿಲುಗಳ ಚಿಲಕವನ್ನೆಲ್ಲ ನೋಡುತ್ತ ಬಂದಳು. ತನ್ನ ಆಭರಣದ ಪೆಟ್ಟಿಗೆಯನ್ನು ನೋಡಿ ಸಮಾಧಾನ ಪಟ್ಟುಕೊಂಡು 'ಹತ್ತಿರ ಇರಲಿ ' ಎಂದು ಒಂದು ಕತ್ತಿಯನ್ನು ತನ್ನ ಚಾಪೆಯ ಹತ್ತಿರವೇ ಇಟ್ಟುಕೊಂಡು ದೀಪವನ್ನು ನಂದಿಸಿದಳು.



ದೀಪ ನಂದಿಸಿದರೂ ಆಕೆಗೆ ನಿದ್ರಿ ಬರಲಿಲ್ಲ. ಏನೇನೋ ಯೋಚನೆಗಳು ಅವಳನ್ನು ಕಾಡುತ್ತಲೇ ಇದ್ದುವು. ಪ್ರತಿಯೊಂದೂ ಆಕೆಗೆ ಭೀತಿಯನ್ನೇ ಉಂಟು ಮಾಡುತ್ತಿತ್ತು. ಅವನು ಸಂಜೆ ಬಂದ 'ಅವರಿಲ್ಲ'ವೆಂದರೂ ಮನೆಯೊಳಗೆ ಪ್ರವೇಶಿಸಿ ಕುಳಿತ "ಇನ್ನು ರಾತ್ರಿ ನಾನು ಎಲ್ಲೂ ಹೋಗುವುದಿಲ್ಲ. ಬೆಳಗ್ಗಿನ ತನಕ ಇಲ್ಲೇ ಇರುತ್ತೇನೆ '' ಎಂದ ಆಗ ಗೋದಮ್ಮನಿಗೆ ಅವನ ಮೆಲೆ ಸಂಶಯವಿರಲಿಲ್ಲ. ಯಾರೋ ಅವರನ್ನು ಕಾಣಲು ಬಂದಿರಬೇಕು-ಎಂದಿಷ್ಟೆ ಇತ್ತು. ಅದರಿಂದಾಗಿ ಆಕೆ ಅವನ ಮಾತಿಗೆ ಪ್ರತಿ ಹೇಳಿರಲಿಲ್ಲ. ದಾರಿಯಲ್ಲಿ ಪದ್ದಕ್ಕ ಸಿಕ್ಕಿದಾಗಲೇ ಅವಳಿಗೆ ಈ ಹೊಸಬನಗುಟ್ಟು ಗೋತ್ತಾದುದು; ಪದ್ಮನಾಭ ಶಾಸ್ತ್ರಿಗಳ ಮನೆಯ ಕಳವು, ಸುಂದರರಾಯರ ಮಗಳ ಕಳವು ಎಲ್ಲ ನೆನಪಾದುದು. ಇವೆಲ್ಲ ನೆನಪುಗಳು ಆಕೆಗೆ ಮೊದಲೇ ಗೊತ್ತಿದ್ದರೆ ಬಂದವನನ್ನು ಹಾಗೆಯೇ ಓಡಿಸುತಿದ್ದಳು.

ಒಳಗೆ ಕಟ ಕಟ ಧ್ವನಿ ಕೇಳಿಸಿದುದರಿಂದ ಗೋದಮ್ಮ ಅದೇನು ಎಂದು ಕಿವಿಯಾನಿಸಿ ಕೇಳಿದಳು. ಅವಳ ಆಭರಣದ ಕರಡಿಗೆಯದೇ ಆ ಧ್ವನಿ. ಆ ಕಳ್ಳ ಬಹುಶ: ಒಳಗೆ ಹೊಕ್ಕಿರಬೇಕು. ಆಭರಣಗಳನ್ನು ಲಪಟಾಯಿಸುತ್ತಿರ ಬೇಕು. ಸದ್ದು ಇನ್ನೂ ಜೋರಾಗಿ ಕೇಳಿಸತೊಡಗಿತು. ಗೋದಮ್ಮನ ಮೈ ಬೆವರತೊಡಗಿತು. ಆಕೆ ನಡುಗುವ ಕೈಗಳಿಂದ ದೀಪ ಹಚ್ಚಿದಳು, ಮೆಲ್ಲ ಮೆಲ್ಲನೆ ಆ ಕೊಣೆಯತ್ತ ನಡೆದಳು. ಆಗ ಆಕೆ ತನ್ನ ಪೂರ್ಣಾಯುಷ್ಯ ಅಂದು ತುಂಬಿತು ಎಂದೇ ಬಗೆದಿದ್ದಳು. ಈಗ ಹೋದಾಗ ಆ ಕಳ್ಳ ಕೊರಮ ನನ್ನ ಮೇಲೆ ಹಾರಿ ಗಂಟಲೊತ್ತಿ ಕೊಂದು ಬಿಡುತ್ತಾನೆಂದೇ ನೆನಸಿದಳು. ಕೈಯಲ್ಲಿ ಭದ್ರವಾಗಿ ಕತ್ತಿಯನ್ನು ಹಿಡಿದುಕೊಂಡಳು.

ಆ ಕೋಣೆಗೆ ಹೋದಾಗ ಬೆಕ್ಕೊಂದು ಸತ್ತ ಇಲಿಯೊಡನೆ ಆಡುತ್ತಿತ್ತು. ಆಗ ಆ ಕರಡಿಗೆ ಶಬ್ದ ಮಾಡುತ್ತಿತ್ತು. " ಹಾಳಾದ ದರಿದ್ರವೇ " ಎಂದು ಆ ಬೆಕ್ಕಿನ ಬೆನ್ನಿಗೆ ಒಂದೇಟು ಕೊಟ್ಟು ತನ್ನ ಭೀತಿಗಾಗಿ ತಾನೇ ನಕ್ಕಳು. ಆಗ ಆಕೆಗೆ ಪಕ್ಕನೆ ನೆನಪಾಯಿತು. ಕಳ್ಳರು ಮನುಷ್ಯರು ನೋಡಿದಾಗ ನಾಯಿ, ಬೆಕ್ಕುಗಳ ರೂಪವನ್ನು ಪಡೆದುಕೊಳ್ಳುತ್ತಾರೆಂದು. ಇದರಿಂದಾಗಿ ಆಕೆ ಆ ಕರಡಿಗೆಯ ಮುಚ್ಚಳ ತೆರೆದು ನೋಡಿದಳು. ಆಭರಣವೆಲ್ಲ ಸರಿಯಾಗಿದೆ ಎಂದು ಖಚಿತವಾದ ಮೇಲೆ ಅಲ್ಲಿಂದ ಹೊರಟು ತನ್ನ ಮಗಳು ಮಲಗಿದಲ್ಲಿಗೆ ಬಂದಳು. ಯಾವ ಯೋಚನೆಯೂ ಇಲ್ಲದೆ ಮಗಳು ಮಲಗಿದ್ದಳು. ಬಟ್ಟೆಯೆಲ್ಲ ಅಸ್ತವ್ಯಸ್ತ ಬಾಗಿಲು ಕೂಡಾ ಹಾಕಿಕೊಂಡಿರಲಿಲ್ಲ. ಬೇಗಬೇಗನೆ ಮಗಳ ಮೈಗೆ ಬಟ್ಟೆ ಹೊದಿಸಿ ಹೊರಗೆ ಬಂದು ಬಾಗಿಲು ಭದ್ರವಾಗಿ ಹಾಕಿಕೊಂಡು ಪುನ: ಬಾಗಿಲು ಕಿಟಕಿಗಳ ಚಿಲಕಗಳನ್ನು ನೋಡುತ್ತ ಬಂದಳು.

ಅವನು ಮಲಗಿದ್ದ. ಕೊರ್ರನೆ ಗೊರಕೆ ಹೊಡೆಯುತ್ತಿದ್ದ. ಕಳ್ಳ ನಿದ್ರೆ. ಅವನನ್ನು ನಂಬಲೇ ಬಾರದು ಎಂದು ದೀಪ ಹಿಡಿದುಕೊಂಡು ತನ್ನ ಚಾಪೆಯ ಹತ್ತಿರ ಬಂದು ಮಲಗಿಕೊಂಡಳು.

ಹಾಗಾದರೂ ಅವಳಿಗೆ ನಿದ್ರೆ ಬರುವ ಲಕ್ಷಣ ಒಂದಿನಿತೂ ಇಲ್ಲ. ಕಣ್ಣೊಡೆದು ಆ ಕರಿಯ ಕತ್ತಲನ್ನೇ ನೋಡುತ್ತ ಮಲಗಿದಳು. ಒಳಗೆ ಚಿಕ್ಕ ಪುಟ್ಟ ಸದ್ದಾದರೂ ದೀಪ ಹಚ್ಚುವಳು. ತನ್ನ ಕತ್ತಿಯನ್ನು ಹಿಡಿದುಕೊಂಡು ಮನೆಯೊಳಗೆಲ್ಲ ಓಡಾಡುವಳು. ಒಮ್ಮೆ ಅವಳು ದೀಪ ಹಚ್ಚಿ ಬಂದಾಗ ಅವನು ಕೇಳಿದ, "ಏನಮ್ಮ ನಿದ್ರೆ ಬಂದಿಲ್ಲವೇ ? "

ನಿದ್ರೆ ಬರಬೇಕೆಂದು ಇವನು ಕಾಯುತ್ತಾನೆ ಕಳ್ಳ ' ಎಂದು ಮನದೊಳಗೆ ಹೇಳಿಕೊಂಡು, "ಬಂದಿಲ್ಲಪ್ಪ ನನಗೆ ಯಾವಾಗಲೂ ಹಾಗೆ ರಾತ್ರೆ ನಿದ್ರೆಯೇ ಬರುವುದಿಲ್ಲ "ಎಂದು ಸುಳ್ಳನ್ನೇ ಸೇರಿಸಿ ಹೇಳಿದಳು.

ಹೌದು, ಪ್ರಾಯವೂ ಆಯಿತಲ್ಲ'' ಎಂದ ಅವನು.

ಅವಳಿಗೆ ಸಿಟ್ಟು ಬಂತು— 'ತನ್ನ ಪ್ರಾಯ ಈ ಕತ್ತೆಗೇನು ಗೊತ್ತು' ಎಂದು. ಆದರೂ ಮರ್ಯಾದೆಗಾಗಿ 'ಹುಂ' ಎಂದಳು.

ಪುನಃ ಆಕೆ ಬಂದು ಮಲಗಿದಾಗ ಕೋಳಿ ಕೂಗಿತ್ತು. ಅಬ್ಬ, ಹೇಗಾದರೂ ಬೆಳಗಾಯಿತಲ್ಲ, ಈ ಕಳ್ಳನ ಕೈಯಿಂ

ದೆ ಬದುಕಿದೆನಲ್ಲ, ಈ ಸಾಹಸವನ್ನು ಅವನೊಡನೆ ಖಂಡಿತಕ್ಕೂ ಹೇಳಬೇಕೆಂದು ಕೊಂಡು ಚಾಪೆಯಿಂದ ಎದ್ದಳು ಗೋದಮ್ಮ.

ಕಾಫಿ ಕುಡಿದು ಅವನು ಹೊರಟು ನಿಂತ. "ನಾನಿನ್ನು ಬರುತ್ತೇನಮ್ಮ. ನಿಮ್ಮವರು ಬಂದರೆ ನನ್ನ ವಿಳಾಸದ ಈ ಚೀಟು ಕೊಡಿ" ಎಂದು ಗೋದಮ್ಮನ ಕೈಯಲ್ಲಿ ಕಾಗದದ ತುಂಡೊಂದನ್ನು ಕೊಟ್ಟು, ಮನೆಯ ಕಡೆ ತಿರುಗಿ ನೋಡುತ್ತ ಹೊರಟು ಹೋದ. ಗೋದಮ್ಮ ಸಮಾಧಾನದ ನಿಟ್ಟುಸಿರು ಬಿಟ್ಟಳು.

ಮತ್ತೂ ಎರಡು ದಿವಸ ಕಳೆದಾಗ ಅವಳ ಗಂಡ ಬಂದ. ಅವನು ಬಂದೊಡನೆಯೇ ಅವನಿಗೆ ಬಾಯಾರಿಕೆ ಕೊಡುವುದನ್ನು ಮರೆತು ಕಳೆದ ಸುದ್ದಿಯನ್ನು ತುಸು ಬಣ್ಣ ಹಚ್ಚಿ ಹೇಳಿ, "ನಾನಾದ ಕಾರಣ ಆ ಕಳ್ಳನಿಂದ ಬದುಕಿದೆ" ಎಂದು ಸೇರಿಸಿದಳು.

"ಅವನು ಕೊಟ್ಟ ಚೀಟು ತಾ" ಎಂದ ಗಂಡ. ಗೋದಮ್ಮ ಅದನ್ನು ತಂದಿತ್ತಳು. ಅದನ್ನು ನೋಡಿ ಅವನ ಮುಖ ಮ್ಲಾನವಾಯಿತು. "ನೀನು ಯಾರನ್ನು ಕಳ್ಳನೆನ್ನುತ್ತಿಯೋ ಅವನು ನನ್ನ ಸ್ನೇಹಿತನ ಮಗ. ಹುಡುಗಿಯನ್ನು ನೋಡಲು ಬಂದಿದ್ದ. ಅವನನ್ನೇನಾದರೂ ಅವಮಾನ ಮಾಡಿ ಕಳುಹಿಸಿದೆಯೊ ?" ಎಂದು ಕೇಳಿದ.

ಆ ಮಾತಿನಿಂದ ಗೋದಮ್ಮನಿಗೆ ಆಶ್ಚರ್ಯವೂ ಆಯಿತು; ನಾಚಿಕೆಯೂ ಆಯಿತು. ಆಕೆ ಪಶ್ಚಾತ್ತಾಪದಿಂದ ನುಡಿದಳು. "ಓ ನನಗೆ ಗೊತ್ತೇ ಆಗಲಿಲ್ಲ. ಚೀಟಿಯಲ್ಲಿ ಮತ್ತೇನು ಬರೆದಿದ್ದಾನೆ ? ಥೂ, ನನ್ನ ಬುದ್ಧಿಯೇ ?"

ಏನು ಬರೆಯುತ್ತಾನೆ; ಏನೂ ಇಲ್ಲ. ಅವನ ವಿಳಾಸ ಮಾತ್ರವಿದೆ" ಎಂದಿಷ್ಟೇ ಹೇಳಿ ನಿಟ್ಟುಸಿರು ಬಿಟ್ಟ ಅವಳ ಗಂಡ.

ಗೋದಮ್ಮನಿಗೆ ಉಸಿರೇ ಇಲ್ಲ. ಎಂಥ ಸುಂದರ ಹುಡುಗ. ಅವನು ತನ್ನ ಅಳಿಯನಾಗಬೇಕೆಂದು ಆಕೆಗೆ ತೋರಿತು. ಆಕೆ ತಲೆ ತಲೆ ಹೊಡೆದುಕೊಂಡುಳು. ಅವನ ಗುಣವನ್ನು ನೂರಾರು ಬಾರಿ ಕೊಂಡಾಡಿದಳು. "ಎಂಥ ಮರ್ಯಾದಸ್ತ ಹುಡುಗ ! ನನಗೆ ಗೊತ್ತೇ ಆಗಲಿಲ್ಲ" ಎಂದು ಹಳಹಳಿಸಿದಳು.

ಮತ್ತೊಂದು ದಿವಸ ಗೋದಮ್ಮನಲ್ಲಿ ಅಂಚೆ ಜವಾನ ಬಂದು ಕವರೊಂದನ್ನು ಕೊಟ್ಟು ಹೋದ. ಅದನ್ನು ಲಗುಬಗೆಯಿಂದ ಗೋದಮ್ಮ ಒಡೆದು ಓದಿಕೊಂಡಳು. ಅವಳ ಸಂತೋಷಕ್ಕೆ ಎಲ್ಲೆ ಇರಲಿಲ್ಲ. ಅವಳು ಗಂಡ ಇರುವಲ್ಲಿಗೆ ಓಡುತ್ತಲೇ ಹೋಗಿ, "ಒಪ್ಪಿದ" ಎಂದು ಚೀರಿ ನುಡಿದಳು.

"ಎಂಥ ಹುಚ್ಚು ಏನು ಒಪ್ಪಿದ ಎಂದು ಗುಂಡ ಕೇಳಿದ"

ಆಕೆಗೆ ಸಂತೋಷದಲ್ಲಿ ಧ್ವನಿಯೇ ಕಟ್ಟಿಹೋದಂತಾಗಿತು. ಆಕೆ ಮೆಲ್ಲ ಮೆಲ್ಲನೆ ನುಡಿದಳು, "ಅವನು .....ಹುಡುಗಿಯನ್ನು ಒಪ್ಪಿದ ......" —

# ಮಾತೆ

ಹೊತ್ತು ಹೆತ್ತು ಜನುಮವಿತ್ತು
ಕೊಟ್ಟೆ ಮಾನವ ರೂಪವ,
ಮುತ್ತನಿತ್ತು ಮುತ್ತನಿತ್ತು
ಬೆಳಗಿ ಪ್ರೇಮದ ದೀಪವ.

ತಪ್ಪು ಹೆಜ್ಜೆಯ ತಿದ್ದಿ ನಡೆಸಿ,
ತೊದಲು ನುಡಿಗಳ ಕೇಳಿ ಸುಖಿಸಿ,
ಎಡವಿ ಬೀಳಲು ಎತ್ತಿ ನಿಲಿಸಿ
ನಗೆಯ ತರಿಸಿದೆ ಅಳುವ ಮರೆಸಿ.

ಮುಗಿದ ಮೊಗ್ಗೆಯ ಮನವ ಅರಳಿಸಿ
ಒಲುವು ನಲುವಿನ ಚೆಲುವ ಬೀರಿಸಿ
ಮುದ್ದು ಮಾಡುತ ವಿದ್ಯೆ ಕಲಿಸಿದೆ
ಕಥೆಯ ಹೇಳುತ ನೀತಿ ತಿಳಿಸಿದೆ.

ಬಾಳನೌಕೆಗೆ ದಾರಿತೋರುತ
ತಣಿದ ಮಾತೆ ನೀ ಎನ್ನನೋಡುತ
ಹೃದಯ ಪೀಠದ ಮಧ್ಯವಿರಿಸಿ
ಧನ್ಯಳಾದೆನು ನಿನ್ನ ಪೂಜಿಸಿ.

—ಶ್ರೀಮತಿ ಸುಮ.





## ನನ್ನ ಬೇಕು-ಬೇಡಗಳು

—ಅನ್ನದಾನಿ ಹಿರೇಮಠ

ದೇವರೇ
ನಿನ್ನ ಬಳಿ ನಾನು ಎಲ್ಲವನೂ ಬೇಡುತ್ತೇನೆ
ಆದರೆ ಯಾವುದರ ಬಂಧನವೂ ನನಗೆ ಬೇಡ.
ಪ್ರತಿಭೆ ಪ್ರತಿಷ್ಠೆಗಳು
ಪ್ರಚಾರ ಪ್ರಶಂಸೆಗಳು ನನಗೆ ಬೇಕು
ಆದರೆ ಅವುಗಳಿಂದ
ಅಹಂ, ಉಂಟಾಗುವುದು ನನಗೆ ಬೇಡ
ದೇವರೇ
ನನಗೆ ಆಳಯೋಚಿಸುವ ಪ್ರಜ್ಞೆ ಬೇಕು
ವೃಥಾ-ಹಾಳಾಗುವ ಚಿಂತೆ ಬೇಡ
ಆಳದನುಭವವೂ ನನಗೆ ಬೇಕು
ಆದರೂ ನಾನು ಮುಗ್ಧನಾಗಿಯೇ
ಉಳಿಯಬೇಕು.
ನನಗೆ ಗುಣಬೇಕು ಗರ್ವಬೇಡ
ಸೌಂದರ್ಯಬೇಕು ಮಾತ್ಸರ್ಯಬೇಡ
ಹಣಬೇಕು ಅದು ಸದ್ವಿನಿಯೋಗವಾಗಬೇಕು.
ಹೆಣ್ಣು ಮಣ್ಣು ಎರಡೂ ಬೇಕು
ಆದರೆ ಅವುಗಳ ಮೋಹದ ಬಂಧನ ನನಗೆ ಬೇಡ.
ದೇವರೇ
ಅತ್ತಲಿತ್ತ ಹೋಗದಂತೆ ನೀನನ್ನ
ಹೆಳವನ್ನ ಮಾಡುವದು ಬೇಡ
ಸುತ್ತುಸುಳಿದು ನೋಡದಂತೆ ಅಂಧತನ,
ಕೇಳದಂತೆ ಕಿವುಡನ್ನ ಮಾಡುವದೂ ಬೇಡ
ಅವುಗಳನ್ನೆಲ್ಲ ಹಿಡಿದಿಡುವ
ಗಟ್ಟಿ ಮನಸೊಂದು ಕೊಟ್ಟರೆ ಸಾಕು.
ದೇವರೇ
ನಾನು ಎಲ್ಲರಿಗೂ
ನಿಸ್ವಾರ್ಥಯುಪಕಾರ ಮಾಡಬೇಕು
ನನಗದರ ಪ್ರತಿಕಾರದಾಶೆ ಹಚ್ಚಬೇಡ
ಎಲ್ಲರ ಪ್ರೀತಿಗೂ ನಾನು ಪಾತ್ರನಾಗಬೇಕು
ಆದರೆ ನಾಟಕೀಯದ ಪಾತ್ರ ನನಗೆ ಕೊಡಬೇಡ—

## ಶರಣು ಮಾಡುವೆ

—ಎಸ್. ಎಸ್. ಭೂಸರಡ್ಡಿ

ಮಾಡುವೆ ಶರಣ ಮಾಡುವೆ
ನಮ್ಮ ಕೂಡಲ ಸಂಗನ ಶರಣರ ಪಾದಕೆ ||
ಮಾಡುವೆ ಶರಣ ಮಾಡುವೆ || ಪ ||

ಮೇದಾರ ಕೇತಯ್ಯ | ಮರೆವಿಂಡ ದೇವಯ್ಯ |
ಆಯ್ದಕ್ಕಿ ಮಾರಯ್ಯ ಅಜಗಂಣಗೆ ||
ಮೈದುನ ರಾಮಯ್ಯ | ಮಡಿವಾಳ ಮಲುಹಣ
ಸಾಧಿಸಿ ಮರುಳಶಂಕರ ಸಿದ್ಧರಾಮಗೆ || ೧ ||

ನೆಂಬಣ್ಣ ನಾಗಯ್ಯ ಬೆಂಬಿಡದೆ ಚೇರಮ |
ಕಂಬಳಿ ಮರುಳಾ ಕಕ್ಕಯ್ಯಗೆ |
ಉಂಡಾ ಪ್ರಸಾದದಿ ಉದ್ಭವಿಸಿದಾತಗೆ |
ಅಂಬಿಗರ ಚೌಡಯ್ಯ ಘನಗಟ್ಟಿವಾಳಂಗೆ || ೨ ||

ಮೊಲ್ಲಿ ಬೊಮ್ಮಯ್ಯಗಳು | ಮಧುವರಸ | ಹರಳಯ್ಯ
ಬಿಲ್ಲಾ ಬಂಕದ ಮಾರಯ್ಯಗೆ | ಬಲ್ಲಾಳ |
ಗೊಲ್ಲಾಳ |
ದೂಪದ ಮಾಚಯ್ಯ ಮಾಳಿಗೆಯ ಮಾರಯ್ಯ |
ಗುರುಭಕ್ತಗೆ || ೩ ||

ಸತ್ಯಕ್ಕ ಪಿಟ್ಟವ್ವೆ ನೀಲಲೋಚನೆ | ಮುಕ್ತಾಯಿ
ಚೆಂಗಳೆ | ಗೊಗ್ಗವ್ವೆ |
ಸತ್ತ ಗಂಡನ ಪಡೆದು | ಹೆತ್ತ ಮಗನಾ ಕೊಂದ
ಭಕ್ತೆಗೆ | ಕಡಳಿಯ ಹೊಕ್ಕಾ ಮಾದೇವಿಗೆ || ೪ ||

ಪೊಡವಿಯೋಳ್ನೂರೆಪ್ಪತ್ತು ಗಣಂಗಳು |
ಅರವತ್ತು ಮೂರು ಪುರಾತನರಿಗೆ
ಪರಿಮಳ ಶ್ರೀಗಂಧ ಧೂಪದೀಪ |
ಪರಿಪೂರ್ಣದಿ ಪ್ರಭುವಿನ ಪಾದಕೆ | ಮಾಡುವೆ |
|| ೫ ||

ಸಂಸ್ಕಾರ ಜೀವಿ

# ಭೈರಮ್ಮಾಜಿ

—ಚನ್ನಪ್ಪ ಎರೇಸೀಮೆ.

ಸಿದ್ಧಗಂಗಾ ಮಹಾಕ್ಷೇತ್ರಕ್ಕೆ ತನುಮನ ಧನಗಳಿಂದ ಸೇವೆಮಾಡಿದವರ ಸಂಖ್ಯೆವಿಪುಲ. ಅದು ವೀರಶೈವ ಮಠಾಧಿಪತಿಗಳ ಸಂಸ್ಥೆಯಾದರೂ ಸಮಸ್ತ ಜನಾಂಗದ ಶ್ರೇಯೋಭಿವೃದ್ಧಿಗೆ ಅದು ಮಾಡಿದ ಸಾರ್ವಕಾಲಿಕ ತ್ಯಾಗಮನೋಭಾವವನ್ನು ಅವಲೋಕಿಸಿ ಎಲ್ಲ ಸಮಾಜದವರೂ ತಮ್ಮ ತನುಸವೆಸಿದುಡಿದಿದ್ದಾರೆ, ಮಾನಸಿಕವಾಗಿ ಶ್ರದ್ಧಾಭಕ್ತಿಯಿಟ್ಟಿದ್ದಾರೆ, ಆರ್ಥಿಕವಾಗಿ ತ್ಯಾಗಮಾಡಿದ್ದಾರೆ, ಈ ತ್ಯಾಗಮನೋಭಾವದಲ್ಲಿ ಲಿಂಗೈಕ್ಯ ಭೈರಮ್ಮಾಜಿಯವರದು ಒಂದು ಮೈಲಿಗಲ್ಲು.

ಭೈರಮ್ಮಾಜಿ ಬೆಂಗಳೂರಿನ ಮಾಧವನಗರದಲ್ಲಿ ವಾಸವಾಗಿದ್ದ ಸುಪ್ರಸಿದ್ಧ 'ಚಾರ್ಟೆಡ್ ಅಕೌಂಟೆಂಟ್" ದಿ|| ರಂಗಸ್ವಾಮಿಯವರ ಧರ್ಮಪತ್ನಿಯವರು. ರಂಗಸ್ವಾಮಿಯವರು ತಮ್ಮಉತ್ತಮರೀತಿಯ ವೃತ್ತಿಗೌರವ ನಿಮಿತ್ತ ಬೆಂಗಳೂರಿಗೆಲ್ಲ ಚಿರಪರಿಚಿತರು. ಪ್ರಾಮಾಣಿಕವಾದ ನಡೆ ನುಡಿ, ಗಾಂಭೀರ್ಯಚರ್ಯೆ ಇವು ಅವರಿಗೆ ವೃತ್ತಿಯಲ್ಲಿ ಅಧಿಕಲಾಭವನ್ನುಂಟುಮಾಡಿದವು. ಬಿಡುವಿಲ್ಲದ ಪರಿಶ್ರಮದಜೀವನ ತಮಗೆ ಸಾಕೆಂದರೂ ಜನಕ್ಕೆ ಅವರೇ ಬೇಕಾಗಿತ್ತು. ಹೀಗಾಗಿ ಆರ್ಥಿಕವಾಗಿ ಅವರು ಬೆಂಗಳೂರಿನ ಇನ್ನಿತರ ವೃತ್ತಿಬಾಂದವರನ್ನೆಲ್ಲ ಹಿಂದೆ ಹಾಕಿದ್ದರು. ಪ್ರಾಮಾಣಿಕವಾದಗಳಿಕೆಯು ಪ್ರಾಮಾಣಿಕವಾದ ಬಳಕೆಯಲ್ಲಿ ಪರ್ಯವಸಾನಗೊಳ್ಳುತ್ತಿತ್ತು. 'ಕಾಗೆ ಒಂದು ಗುಳುಕಂಡರೆ ಕರೆಯದೇ ತನ್ನ ಬಳಗವನೆಲ್ಲವ' ಎಂಬ ಬಸವಣ್ಣನ ನುಡಿಯಂತೆ ಬಂಧು ಬಾಂಧವರಲ್ಲಿ ತಮ್ಮಗಳಿಯ ಬಹ್ವಂಶವನ್ನು ಹಂಚಿಕೊಂಡು ತಿನ್ನುವುದು ಅವರ ಜೀವನಕ್ಕೆ ಅಂಟಿಕೊಂಡುಬಂದ ಸ್ವಭಾವವಾಗಿತ್ತು. ಅನೇಕ ಬಂಧುಬಾಂಧವರನ್ನು ಆರ್ಥಿಕವಾಗಿ ಮೇಲೆತ್ತಿದರು. ದೀನದಲಿತರಿಗೆ ಕೈಲಾದ ಸಹಾಯವನ್ನು ಮಾಡಿದರು. ರಂಗಸ್ವಾಮಿಯವರ ಈ ಔದಾರ್ಯದ ಕೊಡುಗೆಗೆ ಧರ್ಮಪತ್ನಿಯ ಅಡ್ಡಿ ಆತಂಕಗಳು ಎಂದೂಬರಲಿಲ್ಲ. ಐಶ್ವರ್ಯದ ಆಧಿಕ್ಯದಲ್ಲಿ ಸ್ತ್ರೀಸ್ವಭಾವ ಕಾರ್ಪಣ್ಯಭಾವದಿಂದ ವರ್ತಿಸುವುದೂ ಉಂಟು. ಆದರೆ ಮಹಾಸಂಸ್ಕಾರಿಯಾದ ಭೈರಮ್ಮಾಜಿಯವರು ತದ್ವಿರುದ್ಧವಾಗಿದ್ದರು. ಒಂದು ವಿಧದಲ್ಲಿ ಅವರಿಗೆ ರಂಗಸ್ವಾಮಿಯವರಿಗಿಂತಲೂ ಮಿಗಿಲಾದ ಔದಾರ್ಯವಿತ್ತು.

ರಂಗಸ್ವಾಮಿ–ಭೈರಮಾಜಿ ದಂಪತಿಗಳು ದಾನಗುಣವನ್ನು ಬೆಳಸಿಕೊಂಡು ಬಂದುದಕ್ಕೆ ಇನ್ನೊಂದು ಪ್ರಬಲ ಕಾರಣವೂ ಇತ್ತು. ಅದೆಂದರೆ: ದೀರ್ಘಕಾಲದವರೆಗೆ ಆ ದಂಪತಿಗಳಿಗೆ ಮಕ್ಕಳಾಗದೇ ಇದ್ದುದು. ಕೊನೆಗೂ ರಂಗಸ್ವಾಮಿಯವರು ಮಕ್ಕಳನ್ನು ಪಡೆಯುವ ಸೌಭಾಗ್ಯವನ್ನು ಪಡೆಯದೆಯೇ ದಿವಂಗತರಾದರು. ಸುಸಜ್ಜಿತವಾದ ಮಾಧವನಗರದ ಒಂದು ಮನೆ, ಬಿ. ವಿ. ಕೆ ಅಯ್ಯಂಗಾರ್ ರೋಡ್‌ನಲ್ಲೊಂದು ಹಳೆಯ ಮನೆ, ರಾಜಾಜಿನಗರದಲ್ಲೊಂದು ಖಾಲಿನಿವೇಶನ ಇತ್ಯಾದಿ ಸ್ಥಾವರ ಆಸ್ತಿಯನ್ನು ಅಷ್ಟಿಷ್ಟು ಒಡವೆವಸ್ತುಗಳು ಸ್ವಲ್ಪಹಣವನ್ನು ಹೊಂದಿ ಭೈರಮ್ಮಾಜಿ ತನ್ನ ಪತಿಯ ದೌರ್ಭಾಗ್ಯಕ್ಕಾಗಿ ಕಣ್ಣೀರ್ಗರೆಯುತ್ತ ಕಾಲಯಾಪನೆ ಮಾಡಲಾರಂಭಿಸಿದರು; ಮುಮ್ಮಲಮರುಗುತ್ತ ಮುಂದೇನು ಮಾಡಬೇಕೆಂಬುದೇ ತೋಚದೆ ದಿಕ್ಕುಗೆಟ್ಟರು. ತಮ್ಮಪತಿ ರಂಗಸ್ವಾಮಿಯವರು ದಿವಂಗತರಾಗುವ ಕೆಲವುದಿನಗಳ ಮುನ್ನ ಹೆಂಡತಿಯ ಸಂತಾನ ಸೌಭಾಗ್ಯಾಕಾಂಕ್ಷೆಯ ಬಗೆಗೆ ತಮ್ಮೆದುರು ಆಡಿದ್ದ ಕೆಲವುಮಾತುಗಳು ಭೈರಮ್ಮಾಜಿಯ ಹೃದಯಕ್ಕೆ ಸ್ವಲ್ಪ ತಣಿವನ್ನು ಆಗಾಗ ಉಂಟುಮಾಡುತ್ತಿದ್ದವು: "ನಮಗೆ ಮಕ್ಕಳಿಲ್ಲದಿದ್ದರೇನಾಯಿತು ? ಲೋಕದಲ್ಲಿ ಬೇಕಾದಷ್ಟು ಮಕ್ಕಳಿವೆ. ಅವು ನಾವು ದುಡಿದ ಈ ಆಸ್ತಿಯನ್ನು ಹಂಚಿಕೊಂಡು ತಿನ್ನಲಿ. ನಮಗೆ ಮಕ್ಕಳಾಗಿದ್ದರೆ, ಅವರೇನು ಒಳ್ಳೆಯವರಾಗುತ್ತಿದ್ದರೋ ಇಲ್ಲವೋ ಯಾರಿಗೆ ಗೊತ್ತು? ಸಂತಾನವಿಲ್ಲವೆಂದು ಚಿಂತಿಸಿ ಫಲವಿಲ್ಲ ಲೋಕದಲ್ಲಿ ನಮ್ಮಂತೆ ಮಕ್ಕಳಿಲ್ಲದೆ ಸಂಕಟ ಪಡುವವರು ಯಾರೂ ಇಲ್ಲವೋ ? ಈಶ್ವರೇಚ್ಛೆಯನ್ನು ಮೀರುವುದು ಯಾರಿಂದಲೂ ಸಾಧ್ಯವಿಲ್ಲ. ಯಾವುದೋ ಒಳ್ಳೆಯ ಕಾರಣಕ್ಕಾಗಿಯೇ ದೇವರು ನಮಗೆ ಹೀಗೆ ಮಾಡಿರಬೇಕು.

(26 ನೇ ಪುಟನೋಡಿ)



(15 ನೇ ಪುಟದಿಂದ)

ಸಂಯುಕ್ತ ಸಂಸ್ಥಾನದ ಸೆನೇಟಿನ ಇತಿಹಾಸದಲ್ಲಿ ಅತಿದೀರ್ಘ ಭಾಷಣ ಎಂದರೆ ಎರೆಗಾನ್ನಿನ ಮೋರ್ಸ ಎಂಬುವರದು. ೧೯೫೭ ನೆಯ ಇಸ್ವಿ ಎಪ್ರಿಲ್ ೨೪,೨೫ ದಿನಾಂಕಗಳೆರಡೂ ಆ ಭಾಷಣ ನಡೆಯಿತು. ಅವರು ತಮ್ಮ ಭಾಷಣ ಕಾಲಕ್ಕೆ ವಿರಾಮ ಕೇಳಲಿಲ್ಲ. ದಕ್ಷಿಣ ಕೆರೊಲಿನಾದಥರ್ ವಕಾಂಡ ಎಂಬ ಸೆನೇಟ್ಕಾರು ದಿವಾಣಿ ಮಸೂದೆಯನ್ನು ಕುರಿತು ೨೪ ತಾಸು ೧೯ ನಿಮಿಷ ಮಾತಾಡಿದರು.

ಇಂದೂ ಭಾರತದಲ್ಲಿ ಅಸಂಖ್ಯಾತ ಭಾಷಣಕಾರರಿರುವರು. ಸರ್ವ ಶ್ರೀ ಸಿ. ಡಿ ದೇಶ ಮುಖ, ಅಟಲ ಬಿಹಾರಿ ವಾಜಪೇಯಿ, ಭೂಪೇಶ ಗುಪ್ತ, ಸುನುರ ಗುಹಾ, ಪಿಲುಮೋದಿ, ಮಧುಲಿಮಯೆ, ಎಚ್.ವ್ಹಿ. ಕಾಮತ, ಪ್ರೊ ಹಿರೆನ್ ಮುಖರ್ಜಿ' ಜ್ಯೋತಿರ್ಮಯಿ ಬಸು-ಇನ್ನೂ ಎಷ್ಟೊ ಜನರು ಮಾತುಗಾರರೆನಿಸಿ ವಿಶ್ವರಂಗದಲ್ಲಿ ಭಾರತದ ಕಹಳೆಯನ್ನು ಮೊಳಗಿಸಿರುವರು.

ಇದೀಗ ಜಾಗತಿಕ ಭಾಷಣಕಾರರ ಕಾರ್ಯ ಕ್ಷೇತ್ರದ ವಿಹಂಗಮಾವಲೋಕನ! ವೈಖರಿ!

— (ವಿವಿಧ ಮೂಲಗಳಿಂದ)

(8ನೇ ಪುಟದಿಂದ)

ಆದಕಾರಣ ನಾವೆಲ್ಲರೂ ಪ್ರಥಮತಃ ಮಾನವರಾಗಿ, ಸದಾಚಾರಿ ಸಂಪನ್ನರಾಗುತ್ತಾ ಆದರ್ಶ ಮಾನವರಾಗಿ, ದೈವೀಕ ಗುಣಗಳಿಂದ ದೇವ ಮಾನವರಾಗಿ ಬೆಳಗೋಣ; ನಮ್ಮ ರಾಷ್ಟ್ರವನ್ನೂ ಬೆಳಗಿಸೋಣ "ಆರ್ಯ ಜ್ಯೋತಿ ರಗ್ರಾಃ" ಎಂಬಂತೆ, ನಾವು ಪ್ರಕಾಶವಂತರಾಗಿ ಮುಂದುವರಿಯುತ್ತಾ ಇತರರಲ್ಲಿಯೂ ಪ್ರಕಾಶ ಬೀರೋಣ. ಕೊನೆಗೆ, "ಕೃಣ್ವಂತೋ ವಿಶ್ವಮಾರ್ಯಂ" ಎಂಬ ವೇದಾದೇಶದಂತೆ ಸರ್ವವನ್ನೂ ಅಂದರೆ ವಿಶ್ವವನ್ನೇ (ಆರ್ಯ) ಶ್ರೇಷ್ಠರನ್ನಾಗಿ ಮಾಡೋಣ. ಎಷ್ಟರವರೆಗೆ ನಾವೇ (ಆರ್ಯ) ಶ್ರೇಷ್ಟರಾಗುವುದಿಲ್ಲವೋ-ನಮ್ಮ ಸಮಾಜವಾಗಲಿ ರಾಷ್ಟ್ರವಾಗಲೀ ಶ್ರೇಷ್ಠವಾಗದು. ಭಾರತವು ಈಗ ಸ್ವತಂತ್ರವಾಗಿದೆ. ಸ್ವತಂತ್ರ ಭಾರತದ ಪ್ರಜೆಗಳಾದ ನಾವು ಪರತಂತ್ರರಾಗಬಾರದು, ಸ್ವತಂತ್ರರೇ ಆಗಬೇಕು. ಈಗ ಬಳಕೆಯಲ್ಲಿರುವ ಹಿಂದೂ ಶಬ್ದ ಪಾರತಂತ್ರವನ್ನು–ಆರ್ಯ ಶಬ್ದ ಸ್ವತಂತ್ರತೆಯನ್ನೂ ಸೂಚಿಸುತ್ತದೆ. ನಮ್ಮ ದೇಶವನ್ನು ಹಿಂದೂಸ್ಥಾನವೆನ್ನುವ ಬದಲಿಗೆ 'ಭಾರತ'ವೆಂದು ಹೇಳುವಾಗ, ನಮ್ಮನ್ನು ನಾವು ಆರ್ಯರೆಂದು ಕರೆಸಿಕೊಳ್ಳಬಾರದೇಕೆ ? ವಿಚಾರಶೀಲರೇ ಇನ್ನಾದರೂ ಸರಿಯಾಗಿ ಯೋಚಿಸಿ, ಆರ್ಯರಾಗಿರಿ ! **ಕೃಪೆ. ವೇದ ಪ್ರಕಾಶ** —

## ಈ ತಿಂಗಳ ವಿಶೇಷ

**ಟಿ. ಚಂದ್ರರಾಜ ಶೆಟ್ಟಿ**

ಏಪ್ರಿಲ್

1-4-1957. ಭಾರತದಲ್ಲಿ ದಶಮಾಂಶ ನಾಣ್ಯ ಪದ್ಧತಿ ಪ್ರಾರಂಭವಾದದ್ದು.
4-4-1848 ಪ್ರಸಿದ್ಧ ಚಿತ್ರಗಾರನಾಗಿದ್ದ ರಾಜಾರವಿವರ್ಮನ ಜನನ.
4-4-1680. ಮರಾಟರ ರಾಜನಾದ ಶಿವಾಜಿ ಮಹಾರಾಜನ ಮರಣ.
6-4-1929. ಲಂಡನಿನಿಂದ ಕರಾಚಿಗೆ ಮೊದಲನೆಯ ಟಪ್ಪಾಲು ವಿಮಾನ ಬಂದಿಳಿಯಿತು.
12-4-1961. ಮಾನವನನ್ನೊಳಗೊಂಡ ಗ್ರಹಪಥಗಾಮಿ ಆಕಾಶನೌಕೆ 'ವೊಸ್ತೋಕ್' ನ್ನು ಭೂಮಿಯ ಸುತ್ತಲಿನ ಕಕ್ಷೆಯಲ್ಲಿ ಹಾರಿಸಲಾಯಿತು.
13-4-1916. ಫಾಲ್ಕೆಯವರ ಭಾರತದ ಪ್ರಥಮ ಚಲನಚಿತ್ರ 'ಹರಿಶ್ಚಂದ್ರ' ಪ್ರದರ್ಶಿಸಲ್ಪಟ್ಟಿತು.
15-4-1950. ತಿರುವಣ್ಣಾಮಲೆಯ ಋಷಿಪುಂಗವರಾದ ಶ್ರೀ ರಮಣ ಮಹರ್ಷಿಗಳು ಬ್ರಹ್ಮೈಕ್ಯರಾದದ್ದು.
16-4-1900. ಸಾಹಿತಿ ಬೆಟಗೇರಿ ಕೃಷ್ಣಶರ್ಮರ ಜನನ
18-4-1946. ಜಾಗತಿಕ ತಂಟೆಗಳ ನ್ಯಾಯಾಲಯವೆಂದು ಹೆಸರಾದ ಸಂಯುಕ್ತ ಸಂಘದ ಸ್ಥಾಪನೆ.
21-4=1926. ಬ್ರಿಟಿಷ್ ರಾಣಿ ಎಲಿಜಾಬೆತಳ ಜನನ.
22-4-1965. ವಿಧಾನ ಸಭೆಯಲ್ಲಿ ಭೂಸುಧಾರಣಾಮಸೂದೆಯ ಅಂಗೀಕಾರ.
23-4-1564. ಮಹಾಕವಿ ಶೇಕ್ಸ್‌ಪಿಯರನ ಜನನ.
23-4-1858. ಮಹಿಳೆಯರ ಉದ್ಧಾರಕ್ಕಾಗಿ ಶ್ರಮಿಸಿ, ಹಿಂದುಸ್ಥಾನ ಸರಕಾರದಿಂದ "ಕೈಸರ್-ಇ-ಹಿಂದ್" ಪದವಿ ಪಡೆದ ಪಂಡಿತ ರಮಾಬಾಯಿಯ ಜನನ.
30-4-1935. ವಾರ್ಧಾಕ್ಕೆ ಐದು ಮೈಲು ದೂರದವಿರುವ ಸೇವಾಗ್ರಾಮವನ್ನು ಮಹಾತ್ಮರು ತಾವು ಇರತಕ್ಕ ಸ್ಥಳವಾಗಿ ಆರಿಸಿದ್ದು.

ಮಕ್ಕಳಿದ್ದವರು ಲೋಕದಲ್ಲಿ ಎಲ್ಲರೂ ಸುಖಿಗಳೇ ಅಲ್ಲ." ಇತ್ಯಾದಿಗಳೇ ಅವರ ಸಾಂತ್ವನ ವಚನಗಳು. ಈ ಧೈರ್ಯದ ನುಡಿಗಳನ್ನು ಹೇಳಿ, ಒಮ್ಮೆ ಶ್ರೀ ಸಿದ್ಧಗಂಗಾ ಕ್ಷೇತ್ರಕ್ಕೆ ಆ ದಂಪತಿಗಳಿಬ್ಬರೂ ಹೋಗಿ ಅಲ್ಲಿನ ನಿರ್ಮಲ ವಾತಾವರಣದಲ್ಲಿ ನಗುನಗುತ್ತ ಕುಣಿದಾಡುವ ಮಕ್ಕಳನ್ನು ಕಂಡು ಹಿರಿಹಿರಿ ಹಿಗ್ಗಿ ಶ್ರೀಗಳವರ ದರ್ಶನಾಶೀರ್ವಾದ ಪಡೆದು ಬಂದಿದ್ದರು. ರಂಗಸ್ವಾಮಿಯವರಿಗೆ ಶ್ರೀ ಸಿದ್ಧಗಂಗಾ ಕ್ಷೇತ್ರಾಧಿಪತಿಗಳ ಬಗೆಗೆ ಅಪಾರ ಭಕ್ತಿ ವಿಶ್ವಾಸಗಳಿದ್ದವು. ಕ್ಷೇತ್ರಕ್ಕೆ ಹೋಗಿ ಬಂದಾಗಲೆಲ್ಲ ಅವರ ಮನಸ್ಸಿನಲ್ಲಿ ಶ್ರೀ ಕ್ಷೇತ್ರದ ದಾಸೋಹಕ್ಕೆ, ಉಚಿತ ವಿದ್ಯಾರ್ಥಿ ನಿಲಯಕ್ಕೆ ಏನಾದರೂ ನನ್ನ ಕಾಯಕಾರ್ಜಿತ ಸೊತ್ತನ್ನು ಕೊಟ್ಟು ಕೃತಾರ್ಥನಾಗಬೇಕೆಂಬ ಪ್ರಬಲವಾದ ಬಯಕೆಯಿತ್ತು. ಈ ಬಯಕೆ ಈಡೇರುವ ಪೂರ್ವದಲ್ಲೇ ಹಠಾತ್ತಾಗಿ ನಿಧನ ಹೊಂದಿದ ರಂಗಸ್ವಾಮಿಯವರ ಬಯಕೆ ಬಯಕೆಯಾಗೇ ಉಳಿಯಿತು. ಭೈರಮ್ಮಾಜಿಗೆ ತನ್ನ ಪತಿಯ ಈ ಬಯಕೆಯ ಅರಿವಾಗಿತ್ತು. ಅಲ್ಲದೆ ಜೀವನದ ಕ್ಷಣಿಕತೆಯ ಬಗೆಗೆ ದೇಹದ ನಶ್ವರತೆಯ ಬಗೆಗೆ ತನ್ನ ಪತಿಯನಿಧನವೇ ಒಂದು ಜ್ವಲಂತ ಸಾಕ್ಷಿಯಾಗಿತ್ತು. ನನ್ನ ಜೀವನವೂ ಇದರಂತೆಯೇ ಅಶಾಶ್ವತ. ಅಶಾಶ್ವತವಾದ ಈ ದೇಹವನ್ನು ನಂಬಿ ಮಾಡಬೇಕಾದ ಪವಿತ್ರ ಕಾರ್ಯಕ್ಕೆ ಇಂದು ನಾಳೆನ್ನುವುದು ಸಲ್ಲದೆಂದು ದೃಢ ನಿರ್ಧಾರ ಮಾಡಿದರು. ನನ್ನ ಪತಿಯು ನ್ಯಾಯವಾಗಿ ದುಡಿದ ಈ ಚಿರಸ್ಥಿರಸೊತ್ತುಗಳು ನಾನು ಸಾಯುವ ಪೂರ್ವದಲ್ಲಿಯಾದರೂ ಸಾರ್ವಜನಿಕ ಮಕ್ಕಳ ಉಪಯೋಗಕ್ಕೆ ವಿನಿಯೋಗವಾದಾಗಲೇ ನನ್ನ ಸ್ವರ್ಗಸ್ಥ ಪತಿಯ ಆತ್ಮಕ್ಕೆ ಶಾಂತಿಯುಂಟಾದೀತು. ತನ್ಮೂಲಕ ನನ್ನ ಮನಸ್ಸಿಗೂ ನೆಮ್ಮದಿಯೊದಗಿತು. ಆದಷ್ಟು ಬೇಗನೆ ಸತ್ಪಾತ್ರ ದಾನಮಾಡಿ ಮುಗಿಸಬೇಕೆಂಬ ಆಕಾಂಕ್ಷೆ ದಿನೇದಿನೇ ಪ್ರಬಲವಾಗ ತೊಡಗಿತು. ಅನೇಕ ಜನ ಆಪ್ತರಲ್ಲಿ ಈ ವಿಷಯವನ್ನು ಪ್ರಸ್ತಾಪ ಮಾಡಿದರು.

ಒಂದು ದಿನ ಪತಿಯ ವಿಶ್ವಾಸವನ್ನು ಹೊಂದಿದವರೂ ಹೈಕೋರ್ಟಿನ ನಿವೃತ್ತ ನ್ಯಾಯಮೂರ್ತಿಗಳೂ ತಮ್ಮ ನೆರೆಹೊರೆಯಲ್ಲೇ ಇರುವವರೂ ಆದ ಶ್ರೀ ಟಿ. ಎನ್. ಮಲ್ಲಪ್ಪನವರನ್ನು ಅವರ ಸಹೋದರರಾದ ಶ್ರೀ ಟಿ. ಎನ್. ಚನ್ನಪ್ಪನವರುಗಳನ್ನು ಕಂಡು ತಮ್ಮ ಮನಸ್ಸಿನ ತುಡಿತವನ್ನು ತೋಡಿಕೊಂಡರು. । "ಸ್ವಾಮಿ, ನನ್ನ ಪತಿಯು ಹಗಲು ಇರುಳೆನ್ನದೆ ಕಷ್ಟಪಟ್ಟು ಸಂಪಾದಿಸಿರುವ ಈ ಆಸ್ತಿಪಾಸ್ತಿಗಳು, ವಸ್ತು, ಒಡವೆಗಳು ಸದ್ವಿನಿಯೋಗವಾಗಬೇಕು; ದುರ್ವಿನಿಯೋಗವನ್ನು ಸಹಿಸಲಾರೆ. ಯಾರಿಗೆ ಈ ಸೊತ್ತನ್ನು ಒಪ್ಪಿಸಿದರೆ ನನ್ನ ಪತಿಗೆ ಸದ್ಗತಿಯೂ, ನನ್ನ ಮನಸ್ಸಿಗೆ ನೆಮ್ಮದಿಯೂ ದೊರಕೀತು ? ತಾವೇ ನನಗೆ ಮಾರ್ಗದರ್ಶನ ಮಾಡಬೇಕು." ಎಂದರು. ಮಲ್ಲಪ್ಪನವರು "ಅಮ್ಮ, ನಿಮ್ಮ ಒಕ್ಕಲಿಗ ಸಮಾಜ ದೊಡ್ಡದು. ಅನೇಕ ಸಂಘಸಂಸ್ಥೆಗಳಿವೆ. ಯಾವುದಾದರೂ ಒಂದು ಸಂಘಸಂಸ್ಥೆಗೆ ದಾನಮಾಡಬಹುದು." ಎಂದರು. ಆಗ ಭೈರಮ್ಮಾಜಿಯವರು—"ನನಗೆ ನನ್ನ ಸಮಾಜ-ನಿಮ್ಮ ಸಮಾಜವೆಂಬ ಭೇದವಿಲ್ಲ. ಯಾವುದೇ ಸಮಾಜವಾಗಲಿ. ಸತ್ಪಾತ್ರ ದಾನವಾಗಬೇಕು. ನಾನು ಕಂಡಂತೆ ನಮ್ಮ ಸಮಾಜದ ಅನೇಕ ಸಂಘಸಂಸ್ಥೆಗಳ ಬಗೆಗೆ ನನಗೆ ಗೌರವವಿಲ್ಲ; ನನ್ನ ಸೊತ್ತು ಸದ್ವಿನಿಯೋಗವಾದೀತೆಂಬ ನಂಬಿಕೆಯೂ ಇಲ್ಲ. ನನ್ನ ಗಮನಕ್ಕೆ ಬಾರದಿರುವ ಇನ್ನಿತರ ಸಂಘಸಂಸ್ಥೆಗಳ ಬಗೆಗೆ ಹೇಳಲಾರೆ."

"ಹಾಗಾದರೆ ನೀವು ಏನನ್ನೂ ತಿಳಿದುಕೊಳ್ಳದಿದ್ದರೆ ನಿಮ್ಮ ಐಶ್ವರ್ಯ ಸದ್ವಿನಿಯೋಗವಾಗುವ ಒಂದು ಮಾರ್ಗವನ್ನು ಹೇಳುತ್ತೇನೆ ಅಲ್ಲಿಗೆ ಅರ್ಪಿಸಿ ಕೃತಾರ್ಥರಾಗಬಹುದು; ಅದೇ ಸಿದ್ಧಗಂಗಾ ಕ್ಷೇತ್ರ. ಕ್ಷೇತ್ರಾಧಿಕಾರಿಗಳಾದ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು ಮಹಾತಪಸ್ವಿಗಳು. ಯಾವುದೋ ಮಹಾಕಾರ್ಯಕ್ಕಾಗಿ ಅವತರಿಸಿ ಬಂದ ಕಾರಣಿಕರು. ನನಗೆ ತಿಳಿದಮಟ್ಟಿಗೆ ಅಂಥ ಇನ್ನೊಂದು ಸತ್ಪಾತ್ರ ನನ್ನ ಗಮನದಲ್ಲಿಲ್ಲ. ಅಲ್ಲಿ ಹಲವು ಕೋಮಿನ ಸುಮಾರು ನಾಲ್ಕು ಸಾವಿರ ಮಕ್ಕಳು ವಿದ್ಯಾಭ್ಯಾಸ ಮಾಡುತ್ತಿದ್ದಾರೆ. ಯಾವ ಜಾತಿಗೀತಿಗಳ ಕಟ್ಟುಪಾಡಿಲ್ಲದೆ ಅಲ್ಲಿ ದಾಸೋಹ ನಡೆಯುತ್ತದೆ. ಅಲ್ಲಿಗೆ ಕೊಟ್ಟರೆ ನಿಮ್ಮ ಸೊತ್ತು ಸದ್ವಿನಿಯೋಗವಾದ ಹಾಗೂ ಆಯಿತು. ಪವಿತ್ರತಮವಾದ ದಾಸೋಹಕ್ಕೆ ನಿಮ್ಮ ಕಾಯಕದ ಧನ ಅರ್ಪಿಸಲ್ಪಟ್ಟು ನಿಮಗೆ ಕೃತಾರ್ಥತೆಯನ್ನುಂಟುಮಾಡಿದ ಹಾಗೂ ಆಯಿತು. ಅಲ್ಲಿಗೆ ಕೊಟ್ಟರೆ ಎಲ್ಲ ಸಮಾಜದ ಮುಖಂಡರಿಗೂ ಬಂಧು-ಬಾಂಧವರಿಗೂ ತೃಪ್ತಿಯಾದೀತೆಂದು ನನ್ನ ನಂಬುಗೆ. ಇದು ನನ್ನ ಪ್ರಾಮಾಣಿಕವಾದ ಸಲಹೆ; ಇದಕ್ಕಿಂತ ಇನ್ನೊಂದು ಉತ್ತಮ ಸಲಹೆ ನನ್ನಲ್ಲಿಲ್ಲ."

"ಹೌದು ಸ್ವಾಮಿ, ಸಕಾಲದಲ್ಲಿ ನನ್ನ ಮನಸ್ಸಿಗೆ ಒಂದು ಶ್ರೇಷ್ಠ ಮಾರ್ಗವನ್ನು ತೋರಿಸುವದಕ್ಕಾಗಿ ಧನ್ಯವಾದಗಳು" "ಶುಭಸ್ಯ ಶೀಘ್ರಂ" 'ನಾಳಿಂಗೆ ಇಂದೇ ಲೇಸು; ಇಂದಿಂಗೆ ಈಗಲೇ ಲೇಸು' ಎಂದುಕೊಂಡು ಶ್ರೀ ಮಠಕ್ಕೆ ಹೋಗಿ ಶ್ರೀ ಸ್ವಾಮಿಗಳವರ ದರ್ಶನ ಪಡೆದು ನಿಮ್ಮ ಅರಿಕೆಯನ್ನು ಸಲ್ಲಿಸಿರಿ. ಅನಂತರ ಅವರು ಏನು ಅಪ್ಪಣೆ ಮಾಡುತ್ತಾರೋ ತಿಳಿದುಕೊಳ್ಳಿ ಆಮೇಲೆ ಮುಂದಿನ ವಿಚಾರ."

ಹೀಗೆಂದು ಮಲ್ಲಪ್ಪನವರು ತಿಳಿಸಿದ ಮೇಲೆ ಭೈರಮ್ಮಾಜಿಗೆ ಶ್ರೀ ಸಿದ್ಧಗಂಗಾಕ್ಷೇತ್ರವೇ ಕಣ್ಣಲ್ಲಿ ಕಟ್ಟಿದಂತಾಯಿತು ಸಂತೋಷದಿಂದ ಉಬ್ಬಿದರು ಮರುದಿನ ಶ್ರೀ ಕ್ಷೇತ್ರಕ್ಕೆ ಹೊರಟು ಬಂದು ಶ್ರೀ ಸ್ವಾಮಿಗಳವರ ಸನ್ನಿಧಿಯಲ್ಲಿ ಸಾಷ್ಟಾಂಗ ನಮಸ್ಕಾರಮಾಡಿ ಕುಳಿತುಕೊಂಡರು. ಇವರ ಸಾಕಷ್ಟು ಪರಿಚಯವಿದ್ದ ಶ್ರೀಗಳವರು ಸಾಂತ್ವನ ವಚನಗಳನ್ನಾಡಿ 'ಪ್ರಸಾದ ಸ್ವೀಕರಿಸಿರಿ' ಎಂದು ಅಪ್ಪಣೆ ಮಾಡಿದರು. ಅದರಂತೆ ಭೈರಮ್ಮಾಜಿ ಪ್ರಸಾದ ಸ್ವೀಕರಿಸಿ ತೃಪ್ತಿಗೊಂಡು ಬಂದು ಶ್ರೀ ಸ್ವಾಮಿಗಳವರ ಸನ್ನಿಧಿಯಲ್ಲಿ ಕುಳಿತರು. ಹೀಗೆ ಕುಳಿತಾಗ ಒಂದು ರೋಮಾಂಚಕಾರೀ ಅನುಭವ ಭೈರಮ್ಮಾಜಿಗಾಯಿತು. ಇಂಥ ಅನುಭವ ಜೀವನದಲ್ಲಿ ಎಂದೂ ಆಗಿರಲಿಲ್ಲ. ತೃಪ್ತಿಯ ನಿಟ್ಟುಸಿರು ಬಿಟ್ಟರು. ಶ್ರೀಗಳವರು ಭೈರಮ್ಮಾಜಿಯನ್ನು ಒಮ್ಮೆ ದಿಟ್ಟಿಸಿ ನೋಡಿದರು. ಮಹಾಜಂಗಮಪುಂಗವರ ಆ ನೋಟ ಶಿವಲಿಂಗದ ನೋಟ. ಕಣ್ಣು ಶಿವಲಿಂಗ, ಅದು ಶಿವಲಿಂಗವಾಗಿ ಮಂಗಳವನ್ನುಂಟುಮಾಡುವ ಶಕ್ತಿ ಎಲ್ಲರಿಗೂ ಇರುವುದಿಲ್ಲ. ಮಹಾ ಶಿವಯೋಗಿ ಪುಂಗವರ ತಪಸ್ವಿಗಳ ದೃಷ್ಟಿಯಲ್ಲಿರುತ್ತದೆ. ಶಿವಯೋಗಿಗಳವರ ಈ ಅನುಗ್ರಹ ದೃಷ್ಟಿಯಿಂದ ಭೈರಮ್ಮಾಜಿಯ ಮನಸ್ಸಿನಲ್ಲಿ ಉಳಿದಿರಬಹುದಾದ ಅಲ್ಪಸ್ವಲ್ಪ ಸ್ವಾರ್ಥದ ಕಾಳಿಕೆಯೂ ಸುಟ್ಟುಕರಿಮುರಿ ಹೊಂದಿಹೋಯಿತು. ತನ್ನ ಸಮಸ್ತ ಆಸ್ತಿಯನ್ನು ಶ್ರೀ ಮಠದ ದಾಸೋಹ ವ್ಯವಸ್ಥೆಗೇ ದಾನ ಮಾಡಿಬಿಡಬೇಕೆಂಬ ಸಂಕಲ್ಪ ದೃಢಗೊಂಡು ಐಶ್ವರದ ಮೇಲಿನ ಮಮಕಾರ ಮಾಯವಾಯಿತು; ಅಹಂಕಾರ ತೊಲಗಿತು. ಈಗ ಭೈರಮ್ಮಾಜಿ ಸಾತ್ವಿಕ ಶಕ್ತಿಯ ಮಹಾತಾಯಿಯಾಗಿ ತನಗೆ ತಾನು ಕಾಣಿಸಿಕೊಂಡಳು. ತ್ಯಾಗ ಜೀವಿಗಳ ಸಾಲಿಗೇರಿ ನಿಂತವಳಾಗಿ ಗೋಚರಿಸಿದಳು. ಶ್ರೀಗಳವರಲ್ಲಿ ಗದ್ಗದಿತ ಕಂಠಳಾಗಿ—

"ಮಹಾಸ್ವಾಮಿ, ತಮ್ಮ ಈ ಅನುಪಮ ಲೋಕೋಪಕಾರದ ಮಹಾಸಂಸ್ಥೆಗೆ ನನ್ನ ಸಮಗ್ರ ಸೊತ್ತನ್ನೂ ಭಕ್ತಿ ಕಾಣಿಕೆಯಾಗಿ ಅರ್ಪಿಸಲು ಬಂದಿದ್ದೇನೆ. ನನ್ನ ಮೇಲೆ ಕೃಪೆಯಿಟ್ಟು ಸ್ವೀಕರಿಸಿ ತಮ್ಮ ದಾಸೋಹಕ್ಕೆ ಆ ಆಸ್ತಿಯಿಂದ ಬಂದ ಉತ್ಪನ್ನವನ್ನೂ ಯಥಾಮತಿ ವಿನಿಯೋಗಿಸಿಕೊಂಡು ನನ್ನನ್ನು ಕೃತಾರ್ಥಳನ್ನಾಗಿಮಾಡಿ, ನನ್ನ ಈ ನೊಂದ ಜೀವನಕ್ಕೆ ನೆಮ್ಮದಿಯನ್ನುಂಟುಮಾಡಿರಿ" ಎಂದು ಬೇಡಿ ಪಾದಮುಟ್ಟಿ ನಮಸ್ಕರಿಸಿ ಕೈಜೋಡಿಸಿಕೊಂಡು ನಿಂತಳು. ಆಗ ಶ್ರೀಗಳವರು "ಅಮ್ಮಾ, ನಿಮ್ಮ ಜೀವನಕ್ಕೇನುಮಾಡುತ್ತೀರಿ. ಹೀಗೆ ಕೈಯಲ್ಲಿದ್ದ ಸೊತ್ತನ್ನು ಒಮ್ಮೆಲೆ ಅರ್ಪಿಸಿಬಿಟ್ಟರೆ ನಾಳೆ ನಿಮ್ಮನ್ನು ನೋಡುವವರಾರು? ಅಲ್ಲದೆ ನಿಮ್ಮ ಸಮಾಜ ದೊಡ್ಡದು ದೊಡ್ಡ ದೊಡ್ಡ ಸಂಘ ಸಂಸ್ಥೆಗಳಿವೆ. ಅವರೇನೆಂದು ಕೊಂಡರು ? ನಿಮ್ಮ ಆಸ್ತಿಯನ್ನು ನಿಮ್ಮ ಸಮಾಜಕ್ಕೇ ಅರ್ಪಿಸುವುದು ಒಳ್ಳೆಯದು" ಇದು ಲೌಕಿಕ ಎಂದರು.

"ಸ್ವಾಮಿ, ನನಗೆ ನಿಮ್ಮ ಶ್ರೀಪಾದಕ್ಕೆ ಆಸ್ತಿಯನ್ನು ಒಪ್ಪಿಸಿ ನಿಮ್ಮಿಂದಲೇ ಪ್ರಸಾದರೂಪವಾಗಿ ಸ್ವೀಕರಿಸಿ ಜೀವಿಸುತ್ತೇನೆ. ನನ್ನನ್ನು ನೋಡುವವನು ದೇವನಿದ್ದಾನೆ. ನನ್ನ ಪತಿಯ ಸಂಕಲ್ಪವೂ ತಮ್ಮ ಈ ಮಹಾ ಕ್ಷೇತ್ರದ ದಾಸೋಹಕ್ಕೆ ನಮ್ಮ ಐಶ್ವರ್ಯವಿನಿಯೋಗವಾಗಬೇಕೆಂಬುದೇ ಆಗಿದ್ದಿತು. ಅವರ ಸತ್ಸಂಕಲ್ಪವನ್ನು ಈಡೇರಿಸುವುದು ನನ್ನ ಆದ್ಯಕರ್ತವ್ಯ. ನನಗೆ ನಿಮ್ಮ ಸಮಾಜ ನಮ್ಮ ಸಮಾಜವೆಂಬ ಭೇದವಿಲ್ಲ. ಸಿದ್ಧಗಂಗಾಕ್ಷೇತ್ರ ಒಂದು ಸಮಾಜದ್ದಲ್ಲ. ಸರ್ವಹಿಂದೂ ಸಮಾಜವೇ ಇದರ ಭಕ್ತ ಸಮೂಹ. ನಾನು ಕಂಡಂತೆ ಬೇರೆಯಾವ ಸಂಸ್ಥೆಗಳ ಬಗೆಗೂ ಇನಿತೊಂದು ನಂಬಿಕೆಯಿಲ್ಲ. ಒಳ್ಳೆಯ ಸಂಸ್ಥೆಗಳೂ ಇರಬಹುದು; ಆದರೆ ನಮ್ಮ ನಂಬಿಕೆಗೆ ದ್ರೋಹವಾಗಬಾರದಷ್ಟೆ. ನಮ್ಮ ದೃಢಸಂಕಲ್ಪ ಸಿದ್ಧಲಿಂಗೇಶ್ವರನ ಸನ್ನಿಧಿಗೆಸಮರ್ಪಿಸುವುದು. ತನ್ಮೂಲಕ ಕೃತಾರ್ಥತೆ ಪಡೆಯುವುದು- ಸಿದ್ಧಲಿಂಗೇಶ್ವರ ಪ್ರತ್ಯಕ್ಷ ಮೂರ್ತಿಯಾಗಿಯೇ ನಮ್ಮ ಹೃದಯಕ್ಕೆ ತಾವು ಅನುಭವವಾಗುತ್ತಿದ್ದೀರಿ, ಆದ್ದರಿಂದ ನಮ್ಮ ಪ್ರಾರ್ಥನೆಯನ್ನು ಮನ್ನಿಸಬೇಕು".

"ತಾಯಿ; ಇದು ಲೋಕಾಲೌಕಿಕ ಲೋಕನಿಂದೆಗೆ ಅಂಜಬೇಕು. ನಿಮ್ಮಷ್ಟು ಧೈರ್ಯ ನಮಗೆಬಾರದು.

ನೀವೇನೋ ಇಂದು ಶ್ರೀ ಮಠಕ್ಕೆ ನಿಮ್ಮ ಸೊತ್ತನ್ನು ಸಮರ್ಪಿಸಬಹುದು. ನಾಳೆ ನಿಮ್ಮ ಸಮಾಜದವರು ಆಕ್ಷೇಪವೆತ್ತಬಹುದು. ನಿಮ್ಮ ಸಂಕಲ್ಪವೇನೋ ಪರಿಶುದ್ಧವಿರಬಹುದು. ನಿಮ್ಮ ಸಂಕಲ್ಪವನ್ನು ಈಡೇರಿಸಿ ಕೊಡಬೇಕಾದರೆ ನಾಲ್ಕುಜನ ನಿಮ್ಮ ಸಮಾಜ ಮುಖಂಡರೊಡನೆ ಬಂದು ಈ ನಿಮ್ಮ ಸೊತ್ತನ್ನು ಮಠಕ್ಕರ್ಪಿಸಿದರೆ ಮಾತ್ರ ಸಾಧ್ಯ; ಇಲ್ಲವಾದರೆ ನಾವು ಸ್ವೀಕರಿಸುವುದಿಲ್ಲ'' ವೆಂದು ಸ್ಪಷ್ಟವಾಗಿ ಅಪ್ಪಣೆ ಕೊಡಿಸಿದರು.

ಭೈರಮ್ಮಾಜಿ ಆ ಕೂಡಲೇ ಶ್ರೀಗಳವರ ಆಶೀರ್ವಾದ ಪಡೆದು ಬೆಂಗಳೂರಿನ ಕಪಾಲಿ ಥಿಯೇಟರಿನ ಮಾಲೀಕರೂ ಸುಸಂಸ್ಕೃತರೂ ಒಕ್ಕಲಿಗ ಸಮಾಜದಮುಖಂಡರೂ ಆದ ಶ್ರೀಮಾನ್ ರಾಜಗೋಪಾಲ ಅವರನ್ನು ಕಂಡು ತಮ್ಮ ಮನೋಬಯಕೆಯನ್ನು ಶೃತ ಪಡಿಸಿ, ಅವರ ಮುಖಂಡತ್ವದಲ್ಲಿ ನಾಲ್ಕಾರು ಜನರನಿಯೋಗದೊಡನೆ ಶ್ರೀ ಮಠಕ್ಕೆ ಬಂದೇಬಿಟ್ಟರು. ಶ್ರೀಗಳವರಿಗೆ ಭೈರಮ್ಮಾಜಿಯ ಅಚಲ ನಿರ್ಧಾರದ ಬಗ್ಗೆ ಅಪಾರಗೌರವಾದರಗಳುಂಟಾದವು. ರಾಜಗೋಪಾಲರವರೇ ಮೊದಲಾದ ಸಮಾಜ ಮುಖಂಡರು ''ಭೈರಮ್ಮಾಜಿಯ ಸಂಕಲ್ಪ ಪರಿಶುದ್ಧವಾದದ್ದು; ಅವರೂ ಅವರ ಪತಿಗಳೂ ನ್ಯಾಯವಾಗಿ ಸಂಪಾದಿಸಿದ ಸೊತ್ತಿನ ವಿನಿಯೋಗವಿಷಯದಲ್ಲಿ ಅವರಿಗೇ ಸಂಪೂರ್ಣಾಧಿಕಾರವಲ್ಲದೆ ಹಾಗಾಗಬೇಕು, ಹೀಗಾಗಬೇಕು ಎನ್ನುವುದಕ್ಕೇನಾವಾರು ? ಅವರ ಸಂಕಲ್ಪವನ್ನು ಈಡೇರಿಸಿ ಅವರನ್ನು ಕೃತಾರ್ಥರನ್ನಾಗಿಮಾಡುವುದು ಸ್ವಾಮಿಗಳವರ ಕೃಪಾಚಿತ್ತ. ಶ್ರೀ ಕ್ಷೇತ್ರ ಒಕ್ಕಲಿಗ ಸಮಾಜಕ್ಕೆ ಗಣನೀಯವಾಗಿ ಆಶ್ರಯವಿತ್ತುದು ಲೋಕಕ್ಕೇಗೊತ್ತು. ಇಲ್ಲಿಯ ಒಕ್ಕಲಿಗ ಕೋಮಿನ ಮಕ್ಕಳ ಸಂಖ್ಯೆಯೇನೂ ಚಿಕ್ಕದಲ್ಲ. ತಾವು ಈ ಸೊತ್ತನ್ನು ಸ್ವೀಕರಿಸಲು ಸಮಾಜದ ಯಾರ ತಕರಾರೂ ಇರುವುದಿಲ್ಲ" ವೆಂದು ಒಪ್ಪಿಗೆಕೊಟ್ಟ ಮೇಲೆ ಶ್ರೀಗಳವರು ಒಪ್ಪಿದರು. ಅನಂತರ ಭೈರಮ್ಮಾಜಿ ತನ್ನೆಲ್ಲ ಆಸ್ತಿಪಾಸ್ತಿಗಳನ್ನು ಶ್ರೀಮಠಕ್ಕೆ ಬರೆದುಕೊಟ್ಟು ತೃಪ್ತಿಯ ನಿಟ್ಟುಸಿರನ್ನುಬಿಟ್ಟರು. ಕೆಲವು ಕಾಲ ಮಠದಲ್ಲಿಯೇ ಒಂದು ಚಿಕ್ಕ ಮನೆಯನ್ನು ಕಟ್ಟಿಸಿಕೊಂಡು ಇದ್ದು, ಅಲ್ಲಿನ ಮಕ್ಕಳ ವಿದ್ಯಾಭ್ಯಾಸ, ಆಟಪಾಟ, ತುಂಟಾಟಗಳನ್ನು ನೋಡಿ ಹಿರಿಹಿರಿ ಹಿಗ್ಗಿದರು. ಕೊನೆಕೊನೆಗೆ ತಮ್ಮ ಊರಾದ ಆಲೂರಿನಲ್ಲಿ ಕಾಲಕಳೆದು ತಾ|| ೨೯-೧-೧೯೭೧ನೆಯ ಸೋಮವಾರ ಇಹಲೋಕ ವ್ಯಾಪಾರವನ್ನು ಮುಗಿಸಿದರು. ಅವರ ಮೃತ ಶರೀರ ಸಿದ್ಧಲಿಂಗೇಶ್ವರರ ಪುಣ್ಯಭೂಮಿಯಲ್ಲಿ ಅಂತ್ಯಸಂಸ್ಕಾರ ಪಡೆದು ಕೃತಾರ್ಥತೆ ಪಡೆಯಿತು. ಶ್ರೀಗಳವರು ತಾ|| ೯-೨-೭೧ರಂದು ಶ್ರೀ ಕ್ಷೇತ್ರದಲ್ಲಿ ಪುಣ್ಯ ತಿಥಿ ಕಾರ್ಯವನ್ನೇರ್ಪಡಿಸಿ ಅವರ ಹೆಸರಿನಲ್ಲಿ ಅನ್ನ ಸಂತರ್ಪಣೆ ಮಾಡಿಸಿದರು. ಇಂಥ ತ್ಯಾಗ ಜೀವನದ ಮಹಿಳಾ ರತ್ನಗಳು ಸಮಾಜದ ಇನ್ನಿತರರಿಗೆ ದಿವ್ಯಾದರ್ಶಗಳು; ದಾರಿದೀಪಗಳು.

—

## ಶ್ರೀ ಸಿದ್ಧಗಂಗಾ ಶ್ರೀ ಗುರು

ಮೌಢ್ಯದ ಹೆಪ್ಪು, ಸಂಪ್ರದಾಯದ ನೇಣು
ಮೂಢನಂಬಿಕೆಗಳ ಹುತ್ತ, ಪೂರ್ವಾಗ್ರಹದ ಪ್ರೀಡೆ
ಕುಲ ಒಳಕುಲಗಳ ಭೇದ, ಹಣಮದ,
ಹರೆಯದ ಮದ, ಜನಮದದ, ಅಧಿಕಾರ ಮದದ
ಅನೀತಿ ಅನ್ಯಾಯಗಳ ಕಂಡು ನೊಂದು
ಮರುಗುತಿಹ ಲೋಕ ಪಾವನ ಮೂರ್ತಿ
ನಿನ್ನ ಕಳಕಳಿಗೆಲ್ಲಿ ಕೊನೆ ಶ್ರೀ ಸಿದ್ಧಗಂಗಾ ಶ್ರೀಗುರು.

ನೀನೊಲ್ಲೆ ಚಿನ್ನದ ಕಿರೀಟ, ನೀನೊಲ್ಲೆ ಬೆಳ್ಳಿಯ ಸಿಂಹಾಸನ
ನೀನೊಲ್ಲೆ ಬಿರುದು ಬಾವಲಿ, ನೀನೊಲ್ಲೆ ಪದವಿ ಪ್ರಶಸ್ತಿ.
ನೀನೊಲ್ಲೆ ಅತಿವಿನಯ ಪ್ರಶಂಸೆ, ನೀನೊಲ್ಲೆ ಕಾಯಕ
ರಹಿತ ದುಡ್ಡು ದುಗ್ಗಾಣಿ.
ನೀನೊಲ್ಲೆ ಪ್ರಚಾರ, ನೀನೊಲ್ಲೆ ಸೋಮಾರಿತನ,
ನೀನೊಲ್ಲೆ ಅನ್ಯಮತವಿಡಂಬನೆ, ನೀನೊಲ್ಲೆ ಪರಧರ್ಮದ್ವೇಷ
ಶ್ರೀ ಸಿದ್ಧಗಂಗಾ ಶ್ರೀಗುರು
ನೀ ಬಲ್ಲೆ ಲೋಕದ ಅಂಕು ಡೊಂಕು'

ಇಂದು ಮಾಗಡಿ ಕ್ಷೇತ್ರ ನಾಳೆ ಬಾಗೇವಾಡಿ
ಇಲ್ಲಿ ಶ್ರೀರಾಮೋತ್ಸವದ ಅಧ್ಯಕ್ಷ ಮೂರ್ತಿ
ಅಲ್ಲಿ ಬಸವೇಶ್ವರರ ಜಯಂತಿಯ ಅತಿಥಿ
ಕ್ರಿಸ್ತಬಂಧುಗಳ ನಡುವೆ ನೀನಾದೆ ಕ್ಷಮಾಮೂರ್ತಿ
ಮುಸ್ಲಿಮರ ಕಣ್ಣಿನೊಳು ಶಾಂತಿದೂತನೂ ಆದೆ
ಸರ್ವಧರ್ಮಗಳ ಅಂತರಂಗವ ಕಂಡು ಮಹಾಂತನೀನು
"ಅವರವರ ಭಾವಕ್ಕೆ ಅವರವರ ಭಕುತಿಗೆ ಗುರು
ನೀನೊಬ್ಬನೇ''
ಶ್ರೀ ಸಿದ್ಧಗಂಗಾ ಶ್ರೀಗುರು.

—ಹರತಿವೀರೇಶ.